| | | | | |
|---|---|---|---|---|
| 338 | | ಬದಾಮಿನಗರ ಗಾರ್ಡನ್‌ಗೆ ವಾಕಿಂಗ್ ಟ್ರ್ಯಾಕ್ | | 5.00 |
| | | ಒಟ್ಟು (ಉದ್ಯಾನವನಗಳು) | | 435.00 |
| 339 | | ಸೋಮೇಶ್ವರ, ಭೈರಿದೇವರಕೊಪ್ಪ, ತೋಳನಕೆರೆ, ನುಗ್ಗಿಕೆರೆ, ನೃಪತುಂಗ ಬೆಟ್ಟ ಕೆರೆ, ಸತ್ತೂರ ಕೆರೆ ಹಿರಿಕೆರೆ ಹುಚ್ಚವ್ವನ ಕೆರೆ ಹಾಗೂ ಕೆಂಪುಕೆರೆಗಳನ್ನು ಅಭಿವೃದ್ಧಿ ಪಡಿಸುವುದು | | 565.00 |
| | | ಒಟ್ಟು (ಕೆರೆಗಳು) | | 565.00 |
| | | **13. ಸಾಂಸ್ಕೃತಿಕ ಹಾಗೂ ಕ್ರೀಡಾ ಚಟುವಟಿಕೆಗಳ ಉತ್ತೇಜನಕ್ಕಾಗಿ** | | |
| 340 | | ಕಲಾಭವನ ಸುಧಾರಣೆಗೆ ಬಾಕಿ ಮೊತ್ತ | | 200.00 |
| 341 | | ಸವಾಯಿ ಗಂಧರ್ವ ಹಾಲ್ ಸುಧಾರಣೆಗೆ ಬಾಕಿ ಮೊತ್ತ | | 175.00 |
| 342 | | ಹುಬ್ಬಳ್ಳಿ ಟೌನ್ ಹಾಲ್ ಸುಧಾರಣೆಗೆ ಮೊತ್ತ | | 150.00 |
| 343 | | ಕನ್ನಡ ಭವನ ಮತ್ತು ಕನ್‌ವೆನ್ಷನ್ ಸೆಂಟರ್‌ಗಳ ಪೀಠೋಪಕರಣ | | 100.00 |
| 344 | | ಹೆಗ್ಗೇರಿ ಒಳಾಂಗಣ ಕ್ರೀಡಾಂಗಣ ನಿರ್ಮಾಣ | | 100.00 |
| 345 | | ಜಿಗಳೂರ ಕಲ್ಯಾಣ ಮಂಟಪ ಸುಧಾರಣೆಗೆ ಮೊತ್ತ | | 100.00 |
| | | ಒಟ್ಟು | | 825.00 |
| **14. ರೂ. 30 ಕೋಟಿ ಯೋಜನೆಯಲ್ಲಿ ನಿರ್ಮಿಸಿದ ರಸ್ತೆಗಳ ರಕ್ಷಣೆ (ಬ್ಲಾಕ್/ವೈಟ್ ಟಾಪಿಂಗ್) ಹಾಗೂ ಜನನಿಬಿಡ ಪ್ರದೇಶಗಳಲ್ಲಿ ಚರಂಡಿಗಳಿಗೆ ಕವರ್ ಅಳವಡಿಸುವುದು.** | | | | |
| 346 | | ರೂ. 30 ಕೋಟಿ ಯೋಜನೆಯಲ್ಲಿ ನಿರ್ಮಿಸಿದ ರಸ್ತೆಗಳ ರಕ್ಷಣೆ (ಬ್ಲಾಕ್/ವೈಟ್ ಟಾಪಿಂಗ್) ಹಾಗೂ ಜನನಿಬಿಡ ಪ್ರದೇಶಗಳಲ್ಲಿ ಚರಂಡಿಗಳಿಗೆ ಕವರ್ ಅಳವಡಿಸುವುದು | | 1000.00 |
| | | ಒಟ್ಟು | | 1000.00 |
| | | **ಒಟ್ಟು ಮೊತ್ತ (1 ರಿಂದ 14 ರವರೆಗೆ)** | | **10,000.00** |

2. ಈ ಅನುಮೋದನೆಯನ್ನು ಈ ಕೆಳಕಂಡ ಷರತ್ತುಗಳಿಗೆ ಒಟಪಟ್ಟು ನೀಡಲಾಗಿದೆ.

1) ಈ ಅನುಮೋದನೆಯನ್ನು ಕಾಮಗಾರಿಗಳ ಪಟ್ಟಿಗೆ ಮಾತ್ರ ನೀಡಲಾದ ಅನುಮೋದನೆ ಎಂದು ಪರಿಗಣಿಸುವುದು. ಈ ಅನುಮೋದನೆಯನ್ನು ಕಾಮಗಾರಿಗಳ ಪಟ್ಟಿಗೆ ಅಥವಾ ಪಟ್ಟಿಯಲ್ಲಿನ ಯಾವುದೇ ಕಾಮಗಾರಿಗೆ ನೀಡಿರುವ ಆಡಳಿತಾತ್ಮಕ ಅನುಮೋದನೆ ಎಂದು ಪರಿಗಣಿಸುವಂತಿಲ್ಲ.

2) ಸರ್ಕಾರದ ಆದೇಶ ಸಂಖ್ಯೆ : ನಅಇ 167 ಎಸಿಬಿ 2010, ದಿನಾಂಕ : 13-08-2010ರಲ್ಲಿ ಹೇಳಲಾದ ಸೂಚನೆ/ಷರತ್ತುಗಳನ್ನು ಪಾಲಿಸುವುದು.

3) ಸರ್ಕಾರದ ಆದೇಶ ಸಂಖ್ಯೆ : ನಅಇ 167 ಎಬಿಸಿ 2010, ದಿನಾಂಕ : 13-08-2010ರಲ್ಲಿ ಸ್ಪಷ್ಟಪಡಿಸಿರುವಂತೆ ರೂ. 100 ಕೋಟಿ ವಿಶೇಷ ಅನುದಾನದ 2ನೇ ಹಂತದಲ್ಲಿ ಕೈಗೊಳ್ಳಲಾಗುವ ಕಾಮಗಾರಿಗಳಿಗೆ ಸಂಬಂಧಿಸಿದಂತೆ ವೆಚ್ಚವನ್ನು 2011-12 ರಿಂದ 2013-14ರ ಆಥಿಕ ವರ್ಷಗಳಲ್ಲಿ ಸಮನಾಗಿ ಭಾಗ ಮಾಡಿ ವ್ಯಯಿಸತಕ್ಕದ್ದು. ಅದರಂತೆ ರೂ. 100 ಕೋಟಿ ಅನುದಾನವನ್ನು ಈ ಮೂರು ಆರ್ಥಿಕ ವರ್ಷಗಳಲ್ಲಿ ಸಮನಾಗಿ ಭಾಗ ಮಾಡಿ ಬಿಡುಗಡೆ ಮಾಡಲಾಗುವುದು. ಇದಕ್ಕನುಗುಣವಾಗಿ ಟೆಂಡರ್ ಪ್ರಕ್ರಿಯೆ ನಡೆಸುವುದು.

4) ಕರ್ನಾಟಕ ಪೌರ ನಿಗಮಗಳ ನಿಯಮಗಳು, 1977ರಲ್ಲಿ ನೀಡಲಾಗಿರುವ ಸೂಚನೆಗಳಂತೆ ಪ್ರತಿ ಕಾಮಗಾರಿಯ ಅಂದಾಜು ಪಟ್ಟಿಯನ್ನು ತಯಾರಿಸಿ ಅದಕ್ಕೆ ಸಕ್ಷಮ ಪ್ರಾಧಿಕಾರದಿಂದ ಆಡಳಿತಾತ್ಮಕ ಅನುಮೋದನೆಯನ್ನು ಟೆಂಡರ್/ಇ-ಪ್ರೊಕ್ಯೂರ್‌ಮೆಂಟ್ ಪ್ರಕ್ರಿಯೆ ಪ್ರಾರಂಭಿಸುವ ಮೊದಲು ಕಡ್ಡಾಯವಾಗಿ ಪಡೆದುಕೊಳ್ಳತಕ್ಕದ್ದು.

5) ಈ ಕ್ರಿಯಾ ಯೋಜನೆಯಲ್ಲಿ ತೆಗೆದುಕೊಳ್ಳಲಾಗುವ ಕಾಮಗಾರಿಗಳಿಗೆ ಸರ್ಕಾರದ/ಸ್ಥಳೀಯ ಸಂಸ್ಥೆಯ ಅಥವಾ ಇನ್ನಿತರ ಮೂಲಗಳಿಂದ ಯಾವುದೇ ವೆಚ್ಚ ಮಾಡಿರುವುದಿಲ್ಲವೆಂಬುದನ್ನು ಪೂರ್ವಾನ್ವಯವಾಗಿ ಖಚಿತಪಡಿಸಿ ಕೊಳ್ಳತಕ್ಕದ್ದು.

6) ರೂಪಾಯಿ ಎರಡು ನೂರು ಲಕ್ಷ ಅಂದಾಜು ವೆಚ್ಚಕ್ಕಿಂತ ಹೆಚ್ಚಾಗಿರುವ ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ಸರ್ಕಾರದ ಹಂತದಲ್ಲಿ ಕಡ್ಡಾಯವಾಗಿ ಆಡಳಿತಾತ್ಮಕ ಅನುಮೋದನೆ ಪಡೆದುಕೊಳ್ಳುವುದು.

7) ರೂಪಾಯಿ ಐದು ನೂರು ಲಕ್ಷ ಅಂದಾಜು ವೆಚ್ಚಕ್ಕಿಂತ ಹೆಚ್ಚಾಗಿರುವ ಕಾಮಗಾರಿಗಳ ಅಂದಾಜು ಪಟ್ಟಿಗೆ ಕರ್ನಾಟಕ ಸರ್ಕಾರದ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು, 1997ರ ಪ್ರಕಾರ ಸಚಿವ ಸಂಪುಟದ ಅನುಮೋದನೆ ಪಡೆಯುವುದು ಕಡ್ಡಾಯವಾಗಿರುವುದರಿಂದ ಅಂತಹ ಕಾಮಗಾರಿಗಳ ಪಟ್ಟಿಯನ್ನು ಸೂಕ್ತ ಪ್ರಸ್ತಾವನೆಯೊಂದಿಗೆ ಸರ್ಕಾರಕ್ಕೆ ಸಲ್ಲಿಸಿ ಸರ್ಕಾರದ ಅನುಮೋದನೆ ದೊರೆತ ನಂತರ ಟೆಂಡರ್ ಪ್ರಕ್ರಿಯೆ ನಡೆಸುವುದು.

8) ಸಂಚಾರ ವ್ಯವಸ್ಥೆ ಸುಧಾರಣಾ ಕಾಮಗಾರಿಗಳು, ಮಳೆ ನೀರು ತೆರೆದ ಚರಂಡಿ ಕಾಮಗಾರಿಗಳು ಮತ್ತು ವಿದ್ಯುತ್ ಬೀದಿ ದೀಪಗಳ ಅಳವಡಿಕೆ ಹಾಗೂ ಇಂಧನ ಉಳಿತಾಯ ಕಾಮಗಾರಿಗಳಿಗೆ ಸಂಬಂಧಪಟ್ಟಂತೆ ಕ್ರಮ ಸಂಖ್ಯೆ : 220, 222, 223, 224, 239, 339,

ಮತ್ತು 346ರಲ್ಲಿ ಅನುದಾನವನ್ನು ಒಟ್ಟಾರೆಯಾಗಿ ತೋರಿಸಲಾಗಿರುವುದರಿಂದ, ಕಾಮಗಾರಿಗಳಿಗೆ ಟೆಂಡರ್ ಕರೆಯುವ ಮೊದಲು ವಿವರವಾದ ಕಾಮಗಾರಿಗಳ ಪಟ್ಟಿಯನ್ನು ತಯಾರಿಸಿ ಅದಕ್ಕೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆಯುವುದು.

9) ಈ ಅನುದಾನದ ಅಡಿ ಕಾಮಗಾರಿಗಳನ್ನು ನಿರ್ವಹಿಸುವ ಸಲುವಾಗಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ಅದರಡಿ ರಚಿಸಿರುವ ನಿಯಮಗಳು ಮತ್ತು ಹೊರಡಿಸಲಾದ ಸೂಚನೆಗಳಲ್ಲಿನ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ 20 ಇಜಿವಿ 2009(4), ದಿನಾಂಕ : 13-07-2009 ರಲ್ಲಿನ ಎಲ್ಲಾ ಅಂಶಗಳನ್ನು ಕಟ್ಟುನಿಟ್ಟಾಗಿ ಪಾಲಿಸಿ ಟೆಂಡರ್ ಪ್ರಕ್ರಿಯೆಯನ್ನು ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕಡ್ಡಾಯವಾಗಿ ಕೈಗೊಳ್ಳುವುದು.

2. ಸರ್ಕಾರದ ದಿನಾಂಕ : 24-08-2010ರ ಸುತ್ತೋಲೆ ಸಂಖ್ಯೆ : ನಅಇ 167 ಎಸಿಬಿ 2010 ರಲ್ಲಿ ಮಹಾನಗರಪಾಲಿಕೆಗಳಲ್ಲಿ 2ನೇ ಹಂತದಲ್ಲಿ ತೆಗೆದುಕೊಳ್ಳಲು ಉದ್ದೇಶಿಸಲಾಗಿರುವ ಅಭಿವೃದ್ಧಿ ಕಾಮಗಾರಿಗಳನ್ನು ಆಯ್ಕೆ ಮಾಡುವುದಕ್ಕೆ ಮತ್ತು ಅನುಷ್ಠಾನಗೊಳಿಸುವುದಕ್ಕೆ ಸಂಬಂಧ ಪಟ್ಟಂತೆ ಮಾರ್ಗದರ್ಶಿ ಸೂತ್ರಗಳನ್ನು ಮೇಲೆ ಅನುಮೋದಿಸಲಾದ ಕ್ರಿಯಾ ಯೋಜನೆ ಪಟ್ಟಿಯಲ್ಲಿನ ಕಾಮಗಾರಿಗಳನ್ನು ಆಯ್ಕೆ ಮಾಡುವಲ್ಲಿ ಸಂಪೂರ್ಣವಾಗಿ ಪಾಲಿಸಿಲ್ಲದಿರುವುದರಿಂದ, ಮೇಲೆ ಪ್ರಸ್ತಾವನೆಯಲ್ಲಿ ಹೇಳಲಾದ ಕಾರಣಗಳಿಗಾಗಿ ಸದರಿ ಸುತ್ತೋಲೆಯಿಂದ ವಿನಾಯತಿ ನೀಡಲಾಗಿದೆ.

3. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 232 ವೆಚ್ಚ-9/2010, ದಿನಾಂಕ : 23-04-2011 ರಲ್ಲಿ ನೀಡಲಾದ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಆರ್. ಮಹೇಶ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ
(ಮಹಾನಗರ ಪಾಲಿಕೆ-2)

ಪಿ.ಆರ್. ನಂ. 1167

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಗುಲ್ಬರ್ಗಾ ಮಹಾನಗರಪಾಲಿಕೆ ವ್ಯಾಪ್ತಿಯಲ್ಲಿ ರೂ. 100 ಕೋಟಿ ವಿಶೇಷ ಅನುದಾನದ ಯೋಜನೆಯ 2ನೇ ಹಂತದ 2ನೇ ಕ್ರಿಯಾ ಯೋಜನೆ ಪಟ್ಟಿಗೆ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ನಅಇ 167 ಎಬಿಸಿ 2010, ದಿನಾಂಕ : 13-08-2010.
2. ಸರ್ಕಾರದ ಸುತ್ತೋಲೆ ಸಂಖ್ಯೆ : ನಅಇ 167 ಎಸಿಬಿ 2010, ದಿನಾಂಕ : 24-08-2010.
3. ಸರ್ಕಾರದ ಆದೇಶ ಸಂಖ್ಯೆ : ನಅಇ 98 ಎಸಿಜಿ 2010, ದಿನಾಂಕ : 03-11-2010.
4. ಮಾನ್ಯ ಬೃಹತ್ ಮತ್ತು ಮಧ್ಯಮ ನೀರಾವರಿ ಹಾಗೂ ಗುಲ್ಬರ್ಗಾ ಜಿಲ್ಲಾ ಉಸ್ತುವಾರಿ ಸಚಿವರು.
5. ಆಯುಕ್ತರು, ಪೌರಾಡಳಿತ ನಿರ್ದೇಶನಾಲಯ ಇವರ ಏಕ ಕಡತ ಸಂಖ್ಯೆ : ಪೌನಿ/ತಾಂತ್ರಿಕ/ಗುಲ್ಬರ್ಗಾ/116 (ಭಾಗ-4ಎ)\2009-10 ಮತ್ತು ಇದೇ ಸಮ ಸಂಖ್ಯೆಯ ಪತ್ರ ದಿನಾಂಕ : 26-03-2011.
6. ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ, ಇವರ ಪತ್ರ ಸಂಖ್ಯೆ : ಜಿನಕೋ/ಯೋಜನೆ/65/2010-11, ದಿನಾಂಕ : 19-03-2011.
7. ಆಯುಕ್ತರು, ಗುಲ್ಬರ್ಗಾ ಮಹಾನಗರಪಾಲಿಕೆ, ಗುಲ್ಬರ್ಗಾ ಇವರ ಪತ್ರ ಸಂಖ್ಯೆ : ಮನಪಾ/ಕಾಪಾಅ/ಡಿಬಿ/ವಿ.ಅ.-2/52/2010-11/1887, ದಿನಾಂಕ : 25-03-2011.
8. ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ 20 ಇಜಿವಿ 2009 (4), ದಿನಾಂಕ : 13-07-2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ದಿನಾಂಕ : 13-08-2010ರ ಆದೇಶದಲ್ಲಿ ಗುಲ್ಬರ್ಗಾ ಮಹಾನಗರಪಾಲಿಕೆ ಸೇರಿದಂತೆ ರಾಜ್ಯದಲ್ಲಿನ 7 ಮಹಾನಗರಪಾಲಿಕೆಗಳಲ್ಲಿ 2ನೇ ಹಂತದಲ್ಲಿ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು 2011-12 ರಿಂದ 2013-14ರ ಆರ್ಥಿಕ ವರ್ಷಗಳಲ್ಲಿ ಪ್ರತಿ ಮಹಾನಗರಪಾಲಿಕೆಗಳಿಗೆ ತಲಾ ರೂ. 100 ಕೋಟಿಯಂತೆ ವಿಶೇಷ ಅನುದಾನವನ್ನು ಒದಗಿಸಲು ಕೆಲವು ಷರತ್ತುಗಳಿಗೊಳಪಟ್ಟು ಸರ್ಕಾರದ ತಾತ್ವಿಕ ಅನುಮೋದನೆ ನೀಡಲಾಗಿದೆ.

2. ಮೇಲೆ (3) ರಲ್ಲಿ ಓದಲಾದ ಸರ್ಕಾರದ ದಿನಾಂಕ : 03-11-2010ರ ಅದೇಶದಲ್ಲಿ ಗುಲ್ಬರ್ಗಾ ಮಹಾನಗರಪಾಲಿಕೆಯಲ್ಲಿ ರೂ. 100 ಕೋಟಿ ವಿಶೇಷ ಅನುದಾನದ 2ನೇ ಹಂತದ ರೂ. 25 ಕೋಟಿ ಮೊತ್ತದ ಕಾಮಗಾರಿಗಳ ಕ್ರಿಯಾ ಯೋಜನೆ ಪಟ್ಟಿಗೆ ಸರ್ಕಾರದ ತಾತ್ವಿಕ ಅನುಮೋದನೆ ನೀಡಲಾಗಿದೆ.

3. ಮೇಲೆ (4)ರಲ್ಲಿ ಓದಲಾದ ಪತ್ರದೊಂದಿಗೆ ಮಾನ್ಯ ಬೃಹತ್ ಮತ್ತು ಮಧ್ಯಮ ನೀರಾವರಿ ಹಾಗೂ ಗುಲ್ಬರ್ಗಾ ಜಿಲ್ಲಾ ಉಸ್ತುವಾರಿ ಸಚಿವರು, ಗುಲ್ಬರ್ಗಾ ಮಹಾನಗರಪಾಲಿಕೆ ವ್ಯಾಪ್ತಿಯಲ್ಲಿ ರೂ. 100 ಕೋಟಿ ವಿಶೇಷ ಅನುದಾನದ ಯೋಜನೆಯ 2ನೇ ಹಂತದಲ್ಲಿ ಕೈಗೊಳ್ಳಲು ಉದ್ದೇಶಿಸಿರುವ ರೂ. 74 ಕೋಟಿ ಮೊತ್ತದ ಕಾಮಗಾರಿಗಳ ಕ್ರಿಯಾ ಯೋಜನೆ ಪಟ್ಟಿಯನ್ನು ಸಲ್ಲಿಸಿ ಅದಕ್ಕೆ ಸರ್ಕಾರದ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

4. ಮೇಲೆ (5), (6) ಮತ್ತು (7)ರಲ್ಲಿ ಓದಲಾದ ಏಕ ಕಡತ ಮತ್ತು ಪತ್ರಗಳಲ್ಲಿ ಪ್ರಸ್ತಾವನೆಗೆ ಸಂಬಂಧಿಸಿದಂತೆ ಹೆಚ್ಚುವರಿ ಮಾಹಿತಿ ಸಲ್ಲಿಸಿ ಗುಲ್ಬರ್ಗಾ ಮಹಾನಗರಪಾಲಿಕೆ ವ್ಯಾಪ್ತಿಯಲ್ಲಿ ರೂ. 100 ಕೋಟಿ ವಿಶೇಷ ಅನುದಾನದ ಯೋಜನೆಯ 2ನೇ ಹಂತದಲ್ಲಿ ಕೈಗೊಳ್ಳಲು ಉದ್ದೇಶಿಸಿರುವ ರೂ. 74 ಕೋಟಿ ಮೊತ್ತದ ಕಾಮಗಾರಿಗಳ ಕ್ರಿಯಾ ಯೋಜನೆ ಪಟ್ಟಿಗೆ ಸರ್ಕಾರದ ಅನುಮೋದನೆ ಕೋರಿರುತ್ತಾರೆ. ಮತ್ತು ದಿನಾಂಕ : 23-12-2010

ರಿಂದ 01–01–2011 ರವರೆಗೆ 10 ದಿನಗಳ ಕಾಲ ನಡೆದ **"ಕಲಬುರ್ಗಿ ಕಂಪು"** ಕಾರ್ಯಕ್ರಮದ ಅಡಿ ತೆಗೆದುಕೊಂಡ ರೂ. 81.44 ಲಕ್ಷ ಮೊತ್ತದ 11 ಕಾಮಗಾರಿಗಳನ್ನು ಮತ್ತು ರೂ. 18.56 ಲಕ್ಷ ಮೊತ್ತದ ಗುಲ್ಬರ್ಗಾ ನಗರಾಭಿವೃದ್ಧಿ ಪ್ರಾಧಿಕಾರದ ಅಧೀನದಲ್ಲಿ ಬರುವ ರಸ್ತೆ ಕಾಮಗಾರಿಗಳನ್ನು ಒಟ್ಟಾರೆ ರೂ. 100 ಲಕ್ಷ ಮೊತ್ತದ ಕಾಮಗಾರಿಗಳನ್ನು ಸಹ ಸದರಿ 2ನೇ ಹಂತದ ಕ್ರಿಯಾ ಯೋಜನೆಯಲ್ಲಿ ಸೇರಿಸಿಕೊಳ್ಳಲು ಅನುಮತಿ ಕೋರಿರುತ್ತಾರೆ.

5. ಮೇಲೆ (2) ರಲ್ಲಿ ಓದಲಾದ ಸರ್ಕಾರದ ದಿನಾಂಕ : 24–08–2010 ರ ಸುತ್ತೋಲೆಯಲ್ಲಿ ರಾಜ್ಯದಲ್ಲಿನ 7 ಮಹಾನಗರಪಾಲಿಕೆಗಳಲ್ಲಿ 2ನೇ ಹಂತದಲ್ಲಿ ತೆಗೆದುಕೊಳ್ಳಲು ಉದ್ದೇಶಿಸಲಾಗಿರುವ ಅಭಿವೃದ್ಧಿ ಕಾಮಗಾರಿಗಳನ್ನು ಆಯ್ಕೆ ಮಾಡುವುದಕ್ಕೆ ಮತ್ತು ಅನುಷ್ಠಾನಗೊಳಿಸುವುದಕ್ಕೆ ಸಂಬಂಧಪಟ್ಟಂತೆ ಮಾರ್ಗದರ್ಶಿ ಸೂತ್ರಗಳನ್ನು ನೀಡಲಾಗಿದೆ. ಈಗಾಗಲೇ ಮೇಲೆ (3)ರಲ್ಲಿ ಓದಲಾದ ಸರ್ಕಾರದ ದಿನಾಂಕ : 03–11–2010ರ ಆದೇಶದಲ್ಲಿ ಅನುಮೋದಿಸಿರುವ ಕ್ರಿಯಾ ಯೋಜನೆ ಪಟ್ಟಿಯಲ್ಲಿನ ರೂ. 25 ಕೋಟಿ ಮೊತ್ತದ ಕಾಮಗಾರಿಗಳು ಸೇರಿದಂತೆ ಈಗ ಸರ್ಕಾರದ ಅನುಮೋದನೆ ಕೋರಿ ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ಅನುದಾನ ಹಂಚಿಕೆಯನ್ನು ಮಾರ್ಗಸೂಚಿಗಳಿಗೆ ಹೋಲಿಸಿದಾಗ ಕಾಮಗಾರಿಗಳ ಸ್ವರೂಪದಲ್ಲಿನ ಗರಿಷ್ಠ/ಕನಿಷ್ಠ ಮೊತ್ತದ ಮಿತಿಯಲ್ಲಿ ವ್ಯತ್ಯಾಸ ಇದ್ದು, ಅದು ಈ ಕೆಳಕಂಡಂತೆ ಇರುತ್ತದೆಂದು ವರದಿ ಮಾಡಲಾಗಿದೆ.

(ರೂ. ಲಕ್ಷಗಳಲ್ಲಿ)

| ಕ್ರ. ಸಂ | ಕಾಮಗಾರಿಗಳ ಸ್ವರೂಪ | 24–8–2010ರ ಸುತ್ತೋಲೆಯಂತೆ ನಿಗದಿಪಡಿಸಿರುವ ಕನಿಷ್ಠ/ಗರಿಷ್ಠ ಮಿತಿ | ಗುಲ್ಬರ್ಗಾ ಮಹಾನಗರಪಾಲಿಕೆ ಪ್ರಸ್ತಾವನೆ | ವ್ಯತ್ಯಾಸ |
|---|---|---|---|---|
| 1 | ರಸ್ತೆಗಳು, ರಸ್ತೆಬದಿ ಚರಂಡಿಗಳ ಅಭಿವೃದ್ಧಿ, ಪಾದಾಚಾರಿ ಮಾರ್ಗ (Foot paths) ಮತ್ತು ಪಾದಾಚಾರಿ ಸುರಂಗ ಮಾರ್ಗಗಳು (pedestrian underpass/subways) | 3500 | 4050 | 550 |
| 2 | ನೀರು ಸರಬರಾಜು ವಿತರಣಾ ಜಾಲದ ನವೀಕರಣ/ವೃದ್ಧಿ (augmentation) ಮೇಲ್ಮಟ್ಟದ ಜಲಸಂಗ್ರಹಾಗಾರ (O.H.T.) ಮತ್ತು ನೆಲಮಟ್ಟದ ಜಲಸಂಗ್ರಹಾಗಾರ (G.L.S.R.) ನಿರ್ಮಾಣ ಹಾಗೂ ಇತರೆ ನೀರು ಸರಬರಾಜು ಕಾಮಗಾರಿಗಳು. | 2000 | 310 | –1690 |
| 3 | ಒಳಚರಂಡಿ ವ್ಯವಸ್ಥೆ ವಿತರಣಾ ಜಾಲ/ಲ್ಯಾಟರಲ್ಸ್ ಕಾಮಗಾರಿಗಳು ಹಾಗೂ ಇತರೆ ಯುಜಿಡಿ ಕಾಮಗಾರಿಗಳು | 1000 | 0 | –1000 |
| 4 | ಸಂಚಾರ ವ್ಯವಸ್ಥೆ ಸುಧಾರಣೆ ಕಾಮಗಾರಿಗಳು (Traffic management improvement works such as VEHICLE ACTUATED SIGNAL (Solar/UPS) Integrated with surveillance enforcement cameras) | 500 | 0 | –500 |
| 5 | ಘನತ್ಯಾಜ್ಯ ವಸ್ತು ನಿರ್ವಹಣೆ ಸಂಬಂಧಿತ Land Fill site ಅಭಿವೃದ್ಧಿ ಕಾಮಗಾರಿಗಳು, ನಗರ ಸ್ವಚ್ಛತೆ ನಿರ್ವಹಣೆ ಸಂಬಂಧಿತ ಯಂತ್ರೋಪಕರಣಗಳು, ಮಳೆ ನೀರು ಚರಂಡಿ ಕಾಮಗಾರಿಗಳು, ವಿದ್ಯುತ್ ಬೀದಿ ದೀಪಗಳ ಅಳವಡಿಕೆ ಹಾಗೂ ಇಂಧನ ಉಳಿತಾಯ ಕಾಮಗಾರಿಗಳು ಮತ್ತು ಇತರೆ ಮೂಲಭೂತ ಸೌಕರ್ಯ ಅಭಿವೃದ್ಧಿ ಕಾಮಗಾರಿಗಳು | 2000 | 2091 | 91 |
| 6 | ಉದ್ಯಾನವನಗಳ ನಿರ್ಮಾಣ/ಅಭಿವೃದ್ಧಿ ಮತ್ತು ನಗರ ಅರಣ್ಯೀಕರಣ | 1000 | 90 | –910 |
| | ಒಟ್ಟು | 10000 | | |

6. ರೂ. 100 ಕೋಟಿ ವಿಶೇಷ ಅನುದಾನದ ಅಡಿ ಕೈಗೊಳ್ಳಬಹುದಾದ ಕಾಮಗಾರಿಗಳ ಆಯ್ಕೆ ಬಗ್ಗೆ ನಿಗಧಿಪಡಿಸಲಾಗಿರುವ ಮಾರ್ಗದರ್ಶಿ ಸೂತ್ರಗಳೊಂದಿಗೆ ಹೋಲಿಕೆ ಮಾಡಿದಲ್ಲಿ ವ್ಯತ್ಯಾಸ ಕಂಡು ಬರುತ್ತಿದ್ದು ಅದಕ್ಕೆ ಸಂಬಂಧಿಸಿದಂತೆ ಪ್ರಸ್ತಾವನೆಯಲ್ಲಿ ಈ ಕೆಳಕಂಡಂತೆ ಸ್ಪಷ್ಟೀಕರಣ ನೀಡಲಾಗಿದೆ.

(1) ಕ್ರಮ ಸಂಖ್ಯೆ 1 : ಮಾನ್ಯ ಮುಖ್ಯಮಂತ್ರಿಗಳ ವಿಶೇಷ ಅನುದಾನದ ಮೊದಲನೆ ಹಂತದ ರೂ. 100 ಕೋಟಿಗಳಲ್ಲಿ ರಸ್ತೆ ಅಭಿವೃದ್ಧಿ ಕಾಮಗಾರಿಗಳಿಗೆ ರೂ. 52.10 ಕೋಟಿಗಳ ವೆಚ್ಚದಲ್ಲಿ 3 ಪ್ಯಾಕೇಜ್‌ಗಳ ಅಡಿಯಲ್ಲಿ ಸುಮಾರು 12.50 ಕಿ.ಮೀ. ರಸ್ತೆಯನ್ನು ವಿನಿಯೋಗಿಸಿದೆ. ಪ್ರಸ್ತುತ ಕ್ರಿಯಾ ಯೋಜನೆಯಲ್ಲಿ ವರ್ತುಲ ರಸ್ತೆಯಿಂದ ಫೀಡರ್ ರಸ್ತೆಗಳ ನಿರ್ಮಾಣ ಮಾಡಲು ಪ್ರಸ್ತಾವನೆಯನ್ನು ತಯಾರಿಸಿದೆ.

(2) ಕ್ರಮ ಸಂಖ್ಯೆ 2 : ಮಾನ್ಯ ಮುಖ್ಯಮಂತ್ರಿಗಳ ವಿಶೇಷ ಪ್ಯಾಕೇಜ್ ಮೊದಲನೆ ಹಂತದ ರೂ. 100 ಕೋಟಿಯಲ್ಲಿ ನೀರು ಸರಬರಾಜು ಕಾಮಗಾರಿ ಎತ್ತರ ಮಟ್ಟದ ಟ್ಯಾಂಕ್ ನಿರ್ಮಾಣ ಕಾಮಗಾರಿಗಾಗಿ ರೂ. 13.60 ಕೋಟಿ ಅನುದಾನ ನಿಗದಿಪಡಿಸಿದೆ. ಸದರಿ ಕಾಮಗಾರಿಗಳು ಪ್ರಗತಿಯಲ್ಲಿರುತ್ತದೆ. ನೀರು ಸರಬರಾಜುಗಾಗಿ ಒಟ್ಟು ರೂ. 16.70 ಕೋಟಿ ಅನುದಾನ ನಿಗದಿಪಡಿಸಿರುವುದರಿಂದ ಸದ್ಯಕ್ಕೆ ಅವಶ್ಯಕತೆ ಇರುವುದಿಲ್ಲ.

(3) ಕ್ರಮ ಸಂಖ್ಯೆ 3 : ವ್ಯತ್ಯಾಸಕ್ಕೆ ಕಾರಣ ಒಳಚರಂಡಿ ಕಾಮಗಾರಿಗೆ ಏಶಿಯಾ ಅಭಿವೃದ್ಧಿ ಬ್ಯಾಂಕ್‌ದಿಂದ ರೂ. 38.50 ಕೋಟಿಗಳ ಅನುದಾನದಲ್ಲಿ ಟೆಂಡರ್ ಕರೆಯಲಾಗಿರುತ್ತದೆ. ಸದರಿ ಕಾಮಗಾರಿಗಳ ಅವಶ್ಯಕತೆ ಇರುವುದಿಲ್ಲ.

(4) ಕ್ರಮ ಸಂಖ್ಯೆ 4 : ವ್ಯತ್ಯಾಸಕ್ಕೆ ಕಾರಣ ಸಂಚಾರ ವ್ಯವಸ್ಥೆ ಸುಧಾರಣೆ ಕಾಮಗಾರಿಗಳು ಪ್ರಸ್ತುತವಾಗಿ ನಗರಕ್ಕೆ ಅವಶ್ಯಕತೆ ಇರುವುದಿಲ್ಲ.

7. ಮೇಲಿನ ವ್ಯತ್ಯಾಸದಿಂದ ಉಳಿತಾಯವಾಗುವ ಅನುದಾನದ ಮೊತ್ತವನ್ನು ರಸ್ತೆ ಅಭಿವೃದ್ಧಿ ಕಾಮಗಾರಿಗಳ ಭೂ ಸ್ವಾಧೀನಕ್ಕೆ ಹೆಚ್ಚಿನ ಅನುದಾನ ಬೇಕಾದ ಪ್ರಯುಕ್ತ ಉಪಯೋಗಿಸಲು ಪ್ರಸ್ತಾಪಿಸಲಾಗಿದೆ.

8. ಈಗ ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ಈ ಕೆಳಕಂಡ ರಸ್ತೆಗಳಿಗೆ ಸಂಬಂಧಿಸಿದ ಭೂಸ್ವಾಧೀನ ಪಕ್ರಿಯೆಗೆ ಬೇಕಾದ ಮೊತ್ತವನ್ನು ರೂ. 100 ಕೋಟಿ ವಿಶೇಷ ಅನುದಾನ ಯೋಜನೆ ಅಡಿಯಲ್ಲಿ ಈಗ ಸರ್ಕಾರದ ಅನುಮೋದನೆ ಕೋರಿ ಸಲ್ಲಿಸಲಾಗಿರುವ ಕ್ರಿಯಾ ಯೋಜನೆಯಲ್ಲಿ ಒದಗಿಸಲು ಪ್ರಸ್ತಾಪಿಸಲಾಗಿದೆ.

| ಕ್ರ.ಸಂ. | ರಸ್ತೆ ಹೆಸರು | ಚೈನೇಜ್ ಕೆ.ಮೀ. | ರಸ್ತೆ ಉದ್ದ (ಕಿ.ಮೀ.) |
|---|---|---|---|
| 1 | ಎಸ್.ವಿ.ಪಿ ಸರ್ಕಲ್ ದಿಂದ ಎಮ್.ಎಸ್.ಕೆ. ಮಿಲ್ ವರೆಗೆ | 0.0–1.75 | 1.75 |
| 2 | ರಾಷ್ಟ್ರಪತಿ ವೃತ್ತದಿಂದ ರಾಮ ಮಂದಿರ ವರೆಗೆ | 0.0–2.90 | 2.90 |
| 3 | ಜಗತ್ ವೃತ್ತದಿಂದ ಹುಮನಾಬಾದ್ ಬೇಸವರೆಗೆ | 0.0–1.75 | 2.90 |
| 4 | ಎಸ್.ವಿ.ಪಿ. ಸರ್ಕಲ್ ದಿಂದ ಆಳಂದ ಚೆಕ್ ಪೋಸ್ಟ್ | 0.0–4.75 | 4.75 |
| 5. | ಸರ್ಕಾರಿ ಮುದ್ರಣಾಲಯದಿಂದ ವೆಂಕಟಗಿರಿ ಹೋಟೆಲ್ ವರೆಗೆ ಮತ್ತು ಇತರ ವೆಚ್ಚ | 0.00–1.20 | 1.20 |
| | ಒಟ್ಟು | | 13.50 |

9. ಉಚ್ಚನ್ಯಾಯಾಲಯದ ಸಂಚಾರಿ ಪೀಠದ ಆದೇಶದಂತೆ, ಮಾನ್ಯ ಮುಖ್ಯಮಂತ್ರಿಗಳ ವಿಶೇಷ ಅನುದಾನದ ಮೊದಲನೆ ಹಂತದ ರೂ. 100 ಕೋಟಿಗಳ ಅನುದಾನದಲ್ಲಿ ತೆಗೆದುಕೊಳ್ಳಲಾಗುತ್ತಿರುವ ರಸ್ತೆ ಅಭಿವೃದ್ಧಿ ಕಾಮಗಾರಿಗಳ ತೆಗೆದುಕೊಳ್ಳುವ ಪೂರ್ವದಲ್ಲಿ ರಸ್ತೆ ಅಗಲೀಕರಣಕ್ಕೆ ಭೂ–ಸ್ವಾಧೀನಕ್ಕೆ ರೂ. 400 ಲಕ್ಷಗಳನ್ನು ನಿಗದಿಪಡಿಸಲಾಗಿತ್ತು. ಈಗ ಮಾನ್ಯ ಕರ್ನಾಟಕ ಉಚ್ಚನ್ಯಾಯಾಲಯದ ಆದೇಶದಂತೆ ಭೂ–ಸ್ವಾಧೀನ ಪ್ರಕ್ರಿಯೆ ಜರುಗಿಸುವ ಅವಶ್ಯಕತೆ ಇರುವುದರಿಂದ ಭೂಸ್ವಾಧೀನ ಪ್ರಕ್ರಿಯೆಗೆ ಒಟ್ಟು ರೂ. 38.59 ಕೋಟಿ ಹಣ ಅವಶ್ಯಕತೆ ಇದ್ದು 2ನೇ ಹಂತದ ವಿಶೇಷ ಪ್ಯಾಕೇಜ್ ಅನುದಾನದಲ್ಲಿ ರೂ. 34.59 ಕೋಟಿ ಹಣವನ್ನು ಉಪಯೋಗಿಸಿಕೊಳ್ಳಲು ಉದ್ದೇಶಿಸಲಾಗಿದೆ ಎಂದು ಪ್ರಸ್ತಾವನೆಯಲ್ಲಿ ತಿಳಿಸಲಾಗಿದೆ.

10. ಮೇಲೆ (3)ರಲ್ಲಿ ಓದಲಾದ ಸರ್ಕಾರದ ದಿನಾಂಕ : 03–11–2010ರ ಆದೇಶದಲ್ಲಿ ಅನುಮೋದಿಸಿರುವ ಕ್ರಿಯಾ ಯೋಜನೆ ಪಟ್ಟಿಯಲ್ಲಿನ ರೂ. 25 ಕೋಟಿ ಮೊತ್ತದ ಕಾಮಗಾರಿಗಳನ್ನು ಹೊರತುಪಡಿಸಿ ಉಳಿದಂತೆ 2ನೇ ಹಂತದಲ್ಲಿ ತೆಗೆದುಕೊಳ್ಳಲು ಉದ್ದೇಶಿಸಿರುವ ರೂ. 74 ಕೋಟಿ ಮೊತ್ತದ ಕಾಮಗಾರಿಗಳ ಕ್ರಿಯಾ ಯೋಜನೆ ಪಟ್ಟಿಯನ್ನು ಸಲ್ಲಿಸಿ ಅದಕ್ಕೆ ಅನುಮೋದನೆ ಕೋರಿರುತ್ತಾರೆ. ಅದರ ವಿವರಗಳು ಈ ಕೆಳಕಂಡಂತಿವೆ :

| ಕ್ರ.ಸಂ. | ಕಾಮಗಾರಿಗಳ ಹೆಸರು | ಸಂಖ್ಯೆ | ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|---|
| 1 | ರಸ್ತೆ ಅಗಲೀಕರಣದ ಭಾಗವಾಗಿ ಖುಲ್ಲಾ ಸ್ಥಳ ಮತ್ತು ಕಟ್ಟಡಗಳ ಭೂಸ್ವಾಧೀನದ ಪ್ರಕ್ರಿಯೆಗೆ | 6 | 3459.00 |
| 2 | ಪಿ.ಡಿ.ಎ. ಇಂಜಿನಿಯರಿಂಗ್ ಕಾಲೇಜ್ ಹತ್ತಿರ ರೈಲ್ವೆ ಕೆಳ ಸೇತುವೆ ನಿರ್ಮಾಣ | 1 | 200.00 |
| 3 | ಬಿ.ಎಸ್.ಎನ್.ಎಲ್. ಕೇಬಲ್‌ಗಳ ಸ್ಥಳಾಂತರ | 5 | 50.00 |
| 4 | ಸಾರ್ವಜನಿಕ ಸೌಚಾಲಯಗಳ ನಿರ್ಮಾಣ | 20 | 130.00 |
| 5 | ದಾರಿ ದೀಪಗಳ ಅಭಿವೃದ್ಧಿ | | 150.00 |
| 6 | ಯುಟಿಲಿಟಿಗಳ ಸ್ಥಳಾಂತರ | | 100.00 |
| 7 | ಸಿ.ಐ.ಬಿ. ಕಾಲೋನಿಯಲ್ಲಿ ಎತ್ತರ ಮಟ್ಟದ ನೀರಿನ ಟ್ಯಾಂಕ್ ನಿರ್ಮಾಣ | | 200.00 |
| 8 | ಹಳೆಯ ಎತ್ತರ ಮಟ್ಟದ ಮತ್ತು ಜಿ.ಎಲ್.ಎಸ್.ಆರ್. ನೀರಿನ ಟ್ಯಾಂಕ್‌ಗಳ ದುರಸ್ತಿ | | 100.00 |
| 9 | ಗುಲ್ಬರ್ಗಾ ನಗರದ ಉದ್ಯಾನವನಗಳ ಅಭಿವೃದ್ಧಿ | 18 | 90.00 |
| 10 | ವಿವಿಧ ಜನಾಂಗದ ಸ್ಮಶಾನ ಭೂಮಿಗಳಿಗೆ ಕಂಪೌಂಡ್ ಗೋಡೆ ನಿರ್ಮಾಣ | 20 | 210.00 |
| 11 | ಮಳೆ ನೀರು ಚರಂಡಿಗಳ ನಿರ್ಮಾಣ | 13 | 370.00 |
| 12 | ರಸ್ತೆ ಮತ್ತು ಚರಂಡಿ ಅಭಿವೃದ್ಧಿ ಕಾಮಗಾರಿಗಳು | 47 | 2341.00 |
| | ಒಟ್ಟು | | 7400.00 |

11. ಈಗ ಸರ್ಕಾರಕ್ಕೆ ಸಲ್ಲಿಸಿರುವ ಕ್ರಿಯಾ ಯೋಜನೆ ಪಟ್ಟಿಯ ಬಗ್ಗೆ ಸ್ಥಳೀಯ ಜನಪ್ರಿನಿಧಿಗಳ ಜೊತೆ ಚರ್ಚಿಸಿ ಸ್ಥಳೀಯ ಅಭಿವೃದ್ಧಿಯನ್ನು ಗಮನದಲ್ಲಿಟ್ಟುಕೊಂಡು ಸ್ಥಳೀಯ ಅವಶ್ಯಕತೆಗನುಗುಣವಾಗಿ ಕಾಮಗಾರಿಗಳ ಕ್ರಿಯಾ ಯೋಜನೆ ಪಟ್ಟಿಯನ್ನು ತಯಾರು ಮಾಡಲಾಗಿದೆಯೆಂದು ಹಾಗೂ ಅದಕ್ಕೆ ಮಾನ್ಯ ಬೃಹತ್ ಮತ್ತು ಮಧ್ಯಮ ನೀರಾವರಿ ಹಾಗೂ ಗುಲ್ಬರ್ಗಾ ಜಿಲ್ಲಾ ಉಸ್ತುವಾರಿ ಸಚಿವರ ಅಧ್ಯಕ್ಷತೆಯ ಸಮಿತಿಯು ಅನುಮೋದನೆ ನೀಡಿರುತ್ತದೆಂದು ವರದಿ ಮಾಡಲಾಗಿದೆ.

12. ಮೇಲೆ (8)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಹುಬ್ಬಳ್ಳಿ–ಧಾರವಾಡ ಮಹಾನಗರಪಾಲಿಕೆ ಸೇರಿದಂತೆ ರಾಜ್ಯದಲ್ಲಿನ ಮಹಾನಗರಪಾಲಿಕೆಗಳಲ್ಲಿ ರೂ. 10/– ಲಕ್ಷಕ್ಕೆ ಮೀರಿದ ಎಲ್ಲಾ ರೀತಿಯ ಸಾರ್ವಜನಿಕ ಸಂಗ್ರಹಣೆಗಳನ್ನು ಇ–ಪ್ರೊಕ್ಯೂರ್‌ಮೆಂಟ್ ಪ್ಲಾಟ್ ಫಾರಂ ಮುಖಾಂತರ ಕೈಗೊಳ್ಳುವಂತೆ ಆದೇಶಿಸಲಗಿದೆ.

13. ಅದರಂತೆ ಪ್ರಸ್ತಾವನೆಯನ್ನು ಪರಿಗಣಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 16 ಎಸಿಜಿ 2011 ಬೆಂಗಳೂರು, ದಿನಾಂಕ : 15ನೇ ಏಪ್ರಿಲ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಮಹಾನಗರಪಾಲಿಕೆಯಲ್ಲಿ ರೂ. 100 ಕೋಟಿ ವಿಶೇಷ ಅನುದಾನದ ಯೋಜನೆ ಅಡಿ 2ನೇ ಹಂತದಲ್ಲಿ ಕೈಗೊಳ್ಳಲು ಉದ್ದೇಶಿಸಿರುವ ರೂ. 75 ಕೋಟಿ (ರೂಪಾಯಿ ಎಪ್ಪತ್ತೈದು ಕೋಟಿ ಮಾತ್ರ) ಮೊತ್ತದ ಈ ಕೆಳಕಂಡ ಕಾಮಗಾರಿಗಳ 2ನೇ ಕ್ರಿಯಾ ಯೋಜನೆ ಪಟ್ಟಿಗೆ ಸರ್ಕಾರದ ಅನುಮೋದನೆ ನೀಡಲಾಗಿದೆ.

(ಮೊತ್ತ ಲಕ್ಷ ರೂ.ಗಳಲ್ಲಿ)

| ಕ್ರ.ಸಂ. | ಕಾಮಗಾರಿಗಳ ಹೆಸರು | ಸಂಖ್ಯೆ | ಮೊತ್ತ |
|---|---|---|---|
| 1 | ರಸ್ತೆ ಅಗಲೀಕರಣದ ಭಾಗವಾಗಿ ಖುಲ್ಲಾ ಸ್ಥಳ ಮತ್ತು ಕಟ್ಟಡಗಳ ಭೂಸ್ವಾಧೀನದ ಪ್ರಕ್ರಿಯೆಗೆ | | 3459.00 |
| 2 | ಪಿ.ಡಿ.ಎ. ಇಂಜಿನಿಯರಿಂಗ್ ಕಾಲೇಜ್ ಹತ್ತಿರ ರೈಲ್ವೆ ಕೆಳ ಸೇತುವೆ ನಿರ್ಮಾಣ | 1 | 200.00 |
| 3 | ಬಿ.ಎಸ್.ಎನ್.ಎಲ್. ಕೇಬಲ್‌ಗಳ ಸ್ಥಳಾಂತರ | 5 | 50.00 |
| 4 | ಸಾರ್ವಜನಿಕ ಸೌಚಾಲಯಗಳ ನಿರ್ಮಾಣ<br>1) ತಹಸೀಲ್ ಕಚೇರಿ ಹತ್ತಿರ<br>2) ಸುಪರ್ ಮಾರ್ಕೆಟ್<br>3) ಚೌಕ ಪೊಲೀಸ್ ಠಾಣೆ ಹತ್ತಿರ<br>4) ಶಹಾ ಹುಸೇನ್ ಚಿಲ್ಲಾ ಹತ್ತಿರ | 5 | 50.00 |
| 5 | ವಾಣಿಜ್ಯ ಪ್ರದೇಶಗಳಲ್ಲಿ ಸಾರ್ವಜನಿಕ ಸೌಚಾಲಯಗಳ ನಿರ್ಮಾಣ<br>1) ಸಿ.ಟಿ. ಬಸ್ ಸ್ಟ್ಯಾಂಡ್ ಹತ್ತಿರ<br>2) ಜೇವರ್ಗಿ ಕ್ರಾಸ್ ಹತ್ತಿರ<br>3) ಎಂ.ಎಸ್.ಕೆ.ಮಿಲ್ (ಕಣ್ಣಿ ಮಾರ್ಕೆಟ್) ಹತ್ತಿರ<br>4) ಆರ್.ಟಿ.ಓ. ಕಛೇರಿ ಹತ್ತಿರ<br>5) ಹುಮನಾಬಾದ್ ಬೇಸ್ ಹತ್ತಿರ | 5 | 50.00 |
| 6 | ಸಾರ್ವಜನಿಕ ಮೂತ್ರಾಲಯಗಳ ನಿರ್ಮಾಣ<br>1) ಹುಮನಾಬಾದ್ ಬೇಸ್ ಹತ್ತಿರ<br>2) ಚೌಕ ಪೋಲಿಸ್ ಠಾಣೆ ಹತ್ತಿರ<br>3) ಸುಪರ್ ಮಾರ್ಕೆಟ್ ಹತ್ತಿರ<br>4) ಸ್ಟೇಶನ್ ರೋಡ್ ಹತ್ತಿರ<br>5) ಬಸ್ ಸ್ಟ್ಯಾಂಡ್ ಹತ್ತಿರ<br>6) ಸಿ.ಟಿ. ಬಸ್ ಸ್ಟ್ಯಾಂಡ್ ಹತ್ತಿರ<br>7) ಜಗತ್ ಹತ್ತಿರ<br>8) ಎಸ್.ವಿ.ಪಿ. ಚೌಕ ಹತ್ತಿರ<br>9) ಎನ್.ವಿ. ಕಾಲೇಜ್ ಹತ್ತಿರ<br>10) ಕೆ.ಬಿ.ಎನ್. ದವಖಾನೆ ಹತ್ತಿರ<br>11) ಶರಣಬಸವೇಶ್ವರ ದೇವಸ್ಥಾನ ಹತ್ತಿರ<br>12) ಎಲ್.ಐ.ಸಿ. ಕಛೇರಿ ಹತ್ತಿರ<br>13) ಆನಂದ ಹೋಟೆಲ್ ಹತ್ತಿರ | 10 | 30.00 |
| 7 | ದಾರಿ ದೀಪಗಳ ಅಭಿವೃದ್ಧಿ | | 150.00 |
| 8 | ಯುಟಿಲಿಟಿಗಳ ಸ್ಥಳಾಂತರ | | 100.00 |
| 9 | ಸಿ.ಐ.ಬಿ. ಕಾಲೋನಿಯಲ್ಲಿ ಎತ್ತರ ಮಟ್ಟದ ನೀರಿನ ಟ್ಯಾಂಕ್ ನಿರ್ಮಾಣ | | 200.00 |
| 10 | ಹಳೆಯ ಎತ್ತರ ಮಟ್ಟದ ಮತ್ತು ಜಿ.ಎಲ್.ಎಸ್.ಆರ್. ನೀರಿನ ಟ್ಯಾಂಕ್‌ಗಳ ದುರಸ್ತಿ<br>ಉದ್ಯಾನವನಗಳ ಅಭಿವೃದ್ಧಿ | | 100.00 |
| 11 | ಗುಲ್ಬರ್ಗಾ ನಗರದ ಈ ಕೆಳಕಂಡ ಉದ್ಯಾನವನಗಳ ಅಭಿವೃದ್ಧಿ<br>1) ಸುಂದರ ನಗರ<br>2) ಜಯನಗರ ಹನುಮಾನ ಮಂದಿರ<br>3) ಸಂಗಮೇಶ್ವರ ಕಾಲೋನಿ<br>4) ಗುಲ್ಲಾ ಬೌಡಿಯ ಉದ್ಯಾನವನ | 10 | 50.00 |

| | | | |
|---|---|---|---|
| | 5) ವಿವೇಕಾನಂದ ನಗರ ಶಾಲೆ ಹತ್ತಿರ<br>6) ಬಿದ್ದಾಪೂರ (ಪ್ರೀತಿ ನಗರ ಎದುರುಗಡೆ)<br>7) ಕರುಣೇಶ್ವರ ನಗರ<br>8) ವಿಠಲ ನಗರ<br>9) ಶಾಂತಿ ನಗರ (ಎಮ್.ವೈ. ಪಾಟೀಲ ಮನೆಯ ಹತ್ತಿರ)<br>10) ಸಿದ್ದೇಶ್ವರ ಕಲ್ಯಾಣ ಮಂಟಪ ಹಿಂದಗಡೆ | | |
| 12 | ಗುಲ್ಬರ್ಗಾ ನಗರದ ಈ ಕೆಳಕಂಡ ಉದ್ಯಾನವನಗಳ ಅಭಿವೃದ್ಧಿ<br>1) ವರ್ದಾನಗರ (ಸನ್ ಇಂಟರ್ ನ್ಯಾಷನಲ್ ಹಿಂದಗಡೆ) ಜೀವರ್ಗಿ ರಸ್ತೆ<br>2) ಮಕ್ಕಾ ಕಾಲೋನಿ<br>3) ಗ್ರೀನ್ ಹಿಲ್<br>4) ಆದರ್ಶ ನಗರ<br>5) ವಿಶ್ವರಾಧ್ಯ ಕಾಲೋನಿ ಆಳಂದ ರಸ್ತೆ<br>6) ರಾಘವೇಂದ್ರ ಗುಡಿಯ ಹತ್ತಿರ ರಾಘವೇಂದ್ರ ಕಾಲೋನಿ<br>7) ಬಿದ್ದಾಪೂರ ನಿವೃತ್ತ ತಹಶೀಲ್ದಾರ್ ಸಿತಾಳೆ ಮನೆಯ ಹತ್ತಿರ<br>8) ಶಾಂತಿನಗರ ರೆಡ್ಡಿ ಮನೆಯ ಎದುರುಗಡೆ | 8 | 40.00 |
| | ಸ್ಮಶಾನ ಭೂಮಿಗಳಿಗೆ ಕಂಪೌಂಡ್ ವಾಲ ನಿರ್ಮಾಣ | | |
| 13 | 1) ಹೀರಾಪೂರ ಸ್ಮಶಾನ ಭೂಮಿ ರೂ. 25 ಲಕ್ಷ<br>2) ಕಾಂತ ಕಾಲೋನಿ ರೂ. 25 ಲಕ್ಷ | 2 | 50.00 |
| 14 | 1) ದರಿಯಾಪೂರ ರೂ. 15 ಲಕ್ಷ<br>2) ರಾಜಾಪೂರ ರೂ. 10 ಲಕ್ಷ<br>3) ವೆಂಕಟೇಶ್ವರ ಕಾಲೋನಿ ರೂ. 10 ಲಕ್ಷ<br>4) ಬಸವಣ್ಣನಗರ ರೂ. 10 ಲಕ್ಷ<br>5) ಗದಿಗಿಮಠ ರೂ. 5 ಲಕ್ಷ | 5 | 50.00 |
| 15 | 1) ಮಿಲತ್ ನಗರ ರೂ. 10 ಲಕ್ಷ<br>2) ಭಡಕಲ್ ಸ್ಮಶಾನ ಅಲ್ಲಾಬಾದ್ ಮೋಮಿನಪೂರ ಹತ್ತಿರ ರೂ. 5 ಲಕ್ಷ<br>3) ಮಹೇಬೂಬ ನಗರ ಹಾಗರಗಾ ರಸ್ತೆ ರೂ. 15 ಲಕ್ಷ<br>4) ನಯಾ ಮೊಹಲ್ಲಾ ಅಪ್ಪಾರ ಲೈನ್ 3 ಸ್ಮಶಾನ ಭೂಮಿಗಳು ರೂ. 15 ಲಕ್ಷ<br>5) ರೋಜಾ ಪ್ರದೇಶದ ಜಲಾಲವಾಡಿ ಸ್ಮಶಾನ ಭೂಮಿ ರೂ. 5 ಲಕ್ಷ | 5 | 50.00 |
| 16 | 1) ಎಮ್.ಬಿ. ನಗರದ ಬಂದೇ ನವಾಜ ಕಾಲೋನಿ<br>2) ನೂರಾನಿ ಮೊಹಲ್ಲಾ<br>3) ಪಾಯನ ಸ್ಮಶಾನ ಭೂಮಿ<br>4) ರಾಜೀವ್‌ಗಾಂಧಿ ನಗರ ಮತ್ತು ಸಂಜಯ್‌ಗಾಂಧಿ ನಗರ ಮಧ್ಯದಲ್ಲಿರುವ ಸರೋಜಿನ ರುದ್ರಭೂಮಿ<br>5) ಶಹಾಬಜಾರ್ ತಾಂಡಾದಲ್ಲಿರುವ ಬಂಜಾರ ಜನಾಂಗದ ರುದ್ರ ಭೂಮಿ<br>6) ವಾರ್ಡ್ ನಂ. 22ರ ಮಾಲೇವಾಡಿ ಸರ್ವೆ ನಂ. 1/11 ಎ–ರಲ್ಲಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಜನಾಂಗದ ರುದ್ರ ಭೂಮಿ<br>7) ಕಪನೂರು ಗ್ರಾಮದ ಪರಿಶಿಷ್ಟ ಜಾತಿಯ ರುದ್ರ ಭೂಮಿ | 5 | 50.00 |
| 17 | ಗಂಜ ಪ್ರದೇಶದ ಸ್ಮಶಾನ ಭೂಮಿ ಕಂಪೌಂಡ್ ಗೋಡೆ ನಿರ್ಮಾಣ | 1 | 10.00 |
| | ಒಟ್ಟು | | 210.00 |
| | ಮಳೆ ನೀರು ಚರಂಡಿಗಳ ನಿರ್ಮಾಣ | | |
| 18 | ಪೀರ್, ಬಂಗಾಲಿ ದರ್ಗಾದಿಂದ ಕಲಾ ಹುಡಾ ವಾಯಾ ನೂರಾನಿ ಮೊಹಲ್ಲಾ ವರೆಗೆ ಮಳೆ ನೀರು ಚರಂಡಿ ನಿರ್ಮಾಣ | | 20.00 |
| 19 | ಬಕ್ಷಿ ಹವೇಲಿ ಹತ್ತಿರ ಮಳೆ ನೀರು ಚರಂಡಿ ಮತ್ತು ಕಲ್ವರ್ಟ ನಿರ್ಮಾಣ | | 16.00 |
| 20 | ಕೆಂಚ ಬಸವೇಶ್ವರ ಸ್ಮಶಾನ ವಾಯಾ ಅಮಿನಾ ಮಜ್ಜಿದ್ ಹತ್ತಿರ ಮಳೆ ನೀರು ಚರಂಡಿ ನಿರ್ಮಾಣ | | 19.00 |
| 21 | ಬಸವಣ್ಣನಗರ ದಿಂದ ಮಹಾದೇವ ನಗರ ವಾಯಾ ಶೇಖ ರೋಜಾ ಮಿನಾರ್ ವರೆಗೆ ಕಲ್ವರ್ಟ ಮತ್ತು ಮಳೆ ನೀರು ಚರಂಡಿ ನಿರ್ಮಾಣ | | 70.00 |
| 22 | ಕೆ.ಬಿ.ಎನ್. ದರ್ಗಾ ಗೇಟ್ ದಿಂದ ಬಕ್ಷಿ ಹವೇಲಿ ವರೆಗೆ ಮಳೆ ನೀರು ಚರಂಡಿ ನಿರ್ಮಾಣ | | 15.00 |
| 23 | ಸನಾ ಹೋಟೆಲ್ ದಿಂದ ಹಾಲಿ ಪಾಯನ್ ಹತ್ತಿರವಿರುವ ಮಳೆ ನೀರು ಚರಂಡಿ ವರೆಗೆ ವಾಯಾ ಯದುಲ್ಲಾ ಕಾಲೋನಿ | | 30.00 |

| | | | |
|---|---|---|---|
| 24 | ರಿಂಗ್ ರಸ್ತೆಯಿಂದ ಕೆಂಚ ಬಸವೇಶ್ವರ ಸ್ಮಶಾನ ವಾಯಾ ಕೆ.ಸಿ.ಟಿ. ಕಾಲೇಜ್ ಮಳೆ ವರೆಗೆ ರಸ್ತೆ ಬದಿ ಚರಂಡಿ ನಿರ್ಮಾಣ | | 40.00 |
| 25 | ಜಿ.ಡಿ.ಎ. ಹತ್ತಿರವಿರುವ ಹಾಲಿ ಕಲ್ವರ್ಟದಿಂದ ಹರಿಜನ್ ವಾಡಾ ಶಹಾ ಬಜಾರ ವರೆಗೆ ರಸ್ತೆ ಬದಿ ಚರಂಡಿ ನಿರ್ಮಾಣ | | 10.00 |
| 26 | ನ್ಯೂ ರಾಘವೇಂದ್ರ ಕಾಲೋನಿ ಸ್ಮಶಾನ ದಿಂದ ಕೈಲಾಸ ನಗರ ವರೆಗೆ ಮಳೆ ನೀರು ಚರಂಡಿ ನಿರ್ಮಾಣ | | 20.00 |
| 27 | ಬಿಬಿ ರಜಾ ಶಾಲೆ ದಿಂದ ನೂರ ಬಾಗ್ ಹುದಾ ಹತ್ತಿರವಿರುವ ಮಳೆ ನೀರು ಚರಂಡಿ ವರೆಗೆ ಮಳೆ ನೀರು ಚರಂಡಿ ನಿರ್ಮಾಣ | | 15.00 |
| 28 | ಪರವೇಜ್ ಗಾರ್ಡನ್ ದಿಂದ ರಿಂಗ್ ರೋಡ್ ವರೆಗೆ ಮಳೆ ನೀರು ಚರಂಡಿ ನಿರ್ಮಾಣ | | 25.00 |
| 29 | ರಿಂಗ್ ರೋಡ್ ದಿಂದ ತಾಜ್ ನಗರ ವರೆಗೆ ಮಳೆ ನೀರು ಚರಂಡಿ ನಿರ್ಮಾಣ | | 40.00 |
| 30 | ನವ ಚೇತನ್ ಶಾಲೆ ದಿಂದ ಜೈಯತೀರ್ಥ ಮಂಗಲ ಕಾರ್ಯಾಲಯದ ವರೆಗೆ ಮಳೆ ನೀರು ಚರಂಡಿ ನಿರ್ಮಾಣ | | 50.00 |
| | ಒಟ್ಟು | | 370.00 |
| | ರಸ್ತೆ ಮತ್ತು ಚರಂಡಿ ಅಭಿವೃದ್ಧಿ ಕಾಮಗಾರಿಗಳು | | |
| 31 | ಮಹೇಬಾಸ ಮಜ್ಜಿದ ದಿಂದ ಮರಗಮ್ಮಾ ದೇವಸ್ಥಾನ ವಾಯಾ ಭಾಂಡೇ ಬಜಾರ್ ಮತ್ತು ಕಿರಣಾ ಬಜಾರ್ ವರೆಗೆ ರಸ್ತೆ ಅಭಿವೃದ್ಧಿ ನಿರ್ಮಾಣ | | 220.00 |
| 32 | ಅನ್ನಪೂರ್ಣ ಆಸ್ಪತ್ರೆ ದಿಂದ ರಿಂಗ್ ರೋಡ್ (ಸೇಡಂ ರೋಡ್) ವರೆಗೆ ರಸ್ತೆ ಅಭಿವೃದ್ಧಿ ನಿರ್ಮಾಣ 2.00 ಕಿ.ಮೀ. | | 440.00 |
| 33 | ಎಸ್.ಟಿ.ಬಿ.ಟಿ. ಬಸ್ ಸ್ಟ್ಯಾಂಡ್ ದಿಂದ ಜಗತ್ ವೃತ್ತದ ವರೆಗೆ ರಸ್ತೆ ಅಭಿವೃದ್ಧಿ ನಿರ್ಮಾಣ 1.00 ಕಿ.ಮೀ. | | 217.50 |
| 34 | ಪಿ.ಡಿ.ಎ. ಇಂಜಿನಿಯರಿಂಗ್ ಕೆಳ ಸೇತುವೆ ವಾಯಾ ತಾರಾಫೈಲ್ ದಿಂದ ಜೇವರ್ಗಿ ರೋಡ್ ಕೆಳ ಸೇತುವೆ ವರೆಗೆ ರಸ್ತೆ ಅಭಿವೃದ್ಧಿ ನಿರ್ಮಾಣ | | 50.00 |
| 35 | ರಿಂಗ್ ರೋಡ್ ದಿಂದ ಮರಗಮ್ಮಾ ಕ್ರಾಸ್ ವಾಯಾ ಬಂಬೂ ಬಜಾರ್ ವರೆಗೆ ರಸ್ತೆ ಅಭಿವೃದ್ಧಿ ನಿರ್ಮಾಣ | | 175.00 |
| 36 | ಮೋಹನ್ ಲಾಡ್ಜ್ ದಿಂದ ಕೆಳ ಸೇತುವೆ ರಸ್ತೆ ಮಾರ್ಗವಾಗಿ ರಾಮ ಮಂದಿರ ವರೆಗೆ ರಸ್ತೆ ಅಭಿವೃದ್ಧಿ ನಿರ್ಮಾಣ | | 86.00 |
| 37 | ರಿಂಗ್ ರೋಡ್ ದಿಂದ ಅಬ್ಬುಬಾಕರ್ ಕಾಲೋನಿ ವಾಯಾ ಮಕ್ಕಾ ನೀರಿನ ಟ್ಯಾಂಕ್ ದಿಂದ ಹಾಗರಗಾ ಕ್ರಾಸ್ ವರೆಗೆ ರಸ್ತೆ ಅಭಿವೃದ್ಧಿ ನಿರ್ಮಾಣ | | 45.00 |
| 38 | ರಿಂಗ್ ರೋಡ್ ದಿಂದ ಫೈಜುಲ್ ಊಲುಮ ಶಾಲೆ ತಾಜ್ ನಗರ ವರೆಗೆ ರಸ್ತೆ ಅಭಿವೃದ್ಧಿ ನಿರ್ಮಾಣ | | 35.00 |
| 39 | ರಿಂಗ್ ರೋಡ್ ದಿಂದ ನ್ಯೂ ರಾಘವೇಂದ್ರ ಕಾಲೋನಿ ವಾಯಾ ಗಾಲೀಬ್ ಕಾಲೋನಿ ವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ | | 55.00 |
| 40 | ರಿಂಗ್ ರೋಡ್ ದಿಂದ ದೇವಿ ನಗರ ಶಹಾಬಜಾರ್ ವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ | | 25.00 |
| 41 | ರಿಂಗ್ ರೋಡ್ ದಿಂದ ಅಕಬರ್ ಬಾಗ್ ವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ | | 20.00 |
| 42 | ರಿಂಗ್ ರೋಡ್ 80' ರಸ್ತೆ ವಾಯಾ ಎಂ.ಜಿ. ರೋಡ್ ವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ | | 45.00 |
| 43 | ರಿಂಗ್ ರೋಡ್ ದಿಂದ ಮಿಸಬಾ ನಗರ ವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ | | 55.00 |
| 44 | ರಿಂಗ್ ರೋಡ್ ದಿಂದ ಬಂದಾ ನವಾಜ್ ಕ್ರಾಸ್ ವಾಯಾ ಮಿಲ್ಲತ್ ನಗರ ವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ | | 45.00 |
| 45 | ರಿಂಗ್ ರೋಡ್ ದಿಂದ ಹಳೆ ಫಿಲ್ಟರ್ ಬೆಡ್ ರೋಡ್ ವಾಯಾ ಪೂಜಾರಿ ಮಠ್ ಮತ್ತು ಶಿವಲಿಂಗೇಶ್ವರ ದೇವಸ್ಥಾನ ವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ | | 75.00 |
| 46 | ಮಿಲ್ಲರ್ ನಗರದಲ್ಲಿ ರಸ್ತೆ ಮತ್ತು ಚರಂಡಿ ಕಾಮಗಾರಿ ಅಭಿವೃದ್ಧಿ | | 30.00 |
| 47 | ವಾರ್ಡ್ ನಂ. 13 ರಲ್ಲಿ ರಸ್ತೆ ಮತ್ತು ಚರಂಡಿ ಕಾಮಗಾರಿ ಅಭಿವೃದ್ಧಿ | | 35.00 |
| 48 | ಹುಮನಾಬಾದ್ ಮೈನ್ ರೋಡ್ ದಿಂದ ಸಿ.ಸಿ. ರೋಡ್ ಕೆ.ಬಿ.ಎನ್. ವಾಯಾ ಶಹಾಬಾಜ್ ಶಾಲೆ ಹಿಂದಗಡೆ ಹಾಲಿನ ಡೈರಿ ಮತ್ತು ಮಜ್ಜಿದ ಅಲೀ ಬಗದಾದ ಕಾಲೋನಿ ವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ | | 35.00 |
| 49 | ಗಾಂಧಿನಗರ ಅಂಬಾ ಭವಾನಿ ದೇವಸ್ಥಾನ ದಿಂದ ಪೂಜಾರಿ ಮಠ ರೋಡ್ ವಾಯಾ ಕೆ.ಇ.ಬಿ. ಕರ್ಘಾನಾ ವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ | | 20.00 |
| 50 | ಬಾಬು ಟೈಲರ್ ಮನೆ ಭವಾನಿ ನಗರ ದಿಂದ ಮುಸ್ಲಿಂಗ್ ಸಂಘ ಮೈನ್ ರೋಡ್ ವರೆಗೆ ರಸ್ತೆ ಮತ್ತು ಚರಂಡಿಗಳ ಅಭಿವೃದ್ಧಿ ಕಾಮಗಾರಿ | | 20.00 |
| 51 | ಗಂಜ್ ರೋಡ್ ದಿಂದ ಮೋನಪ್ಪಾ ದಾಲ್ ಮಿಲ್ ವಾಯಾ ಗೋಳಾ ಚೌಕ ವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ | | 45.00 |

| | | | |
|---|---|---|---|
| 52 | ಫಿಲ್ಟರ್ ಬೆಡ್ ಅಹ್ಮದ್ ನಗರ ಮತ್ತು ಮಜ್ಜಿದ ಸುತ್ತ ಮುತ್ತಲಿನ ರಸ್ತೆಗಳ ಅಭಿವೃದ್ಧಿ ಕಾಮಗಾರಿ | | 35.00 |
| 53 | ತಾಜ ನಗರ ಮುಖ್ಯ ರಸ್ತೆ ದಿಂದ ತಾಜ ಸುಲ್ತಾನಪೂರ್ ರೋಡ್ ವಾಯಾ ಕಂಚಿನ ಮಹಲ್ ಮಜ್ಜಿದ ವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ | | 10.00 |
| 54 | ಶೇಕ ಡೆಕ್ಕನ್ ಕಾಲೋನಿ ಹುಸೇನಿ ನಗರ ಮತ್ತು ಜುನ್ನೈದಿ ಕಾಲೋನಿ ವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ | | 45.00 |
| 55 | ರಿಂಗ್ ರೋಡ್ ದಿಂದ ವಿರೇಂದ್ರ ಪಾಟೀಲ್ ಲೇಔಟ್ ವಾಯಾ ಲಕ್ಷ್ಮೀ ನಗರ ವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ | | 12.00 |
| 56 | ಕುಟುಂಬ ಕಲ್ಯಾಣ ನಗರ ದೂರವಾನಿ ಕೇಂದ್ರ ದಿಂದ ರೇವಣಸಿದ್ದೇಶ್ವರ ನಗರ ವರೆಗೆ ರಸ್ತೆ ಮತ್ತು ಚರಂಡಿ ಅಭಿವೃದ್ಧಿ ಕಾಮಗಾರಿ | | 22.00 |
| 57 | ಚನ್ನಮಲ್ಲೇಶ್ವರ ನಗರದಲ್ಲಿ ರಸ್ತೆ ಮತ್ತು ಚರಂಡಿ ಅಭಿವೃದ್ಧಿ ಕಾಮಗಾರಿ | | 16.00 |
| 58 | ಫಿರದೋಸ್ ಕಾಲೋನಿ ಮತ್ತು ಗುಲ್ಷನ್ ಅರಾಫತ್ ಕಾಲೋನಿಯಲ್ಲಿ ರಸ್ತೆ ಮತ್ತು ಚರಂಡಿ ಅಭಿವೃದ್ಧಿ ಕಾಮಗಾರಿ | | 22.00 |
| 59 | ನಬಿ ಕಾಲೋನಿ ಶಹಾಬಜಾರ್‌ರಲ್ಲಿ ರಸ್ತೆ ಮತ್ತು ಚರಂಡಿ ಅಭಿವೃದ್ಧಿ ಕಾಮಗಾರಿ | | 11.00 |
| 60 | ಶೇಖ ರೋಜಾ ಪ್ರದೇಶದ ಮುಖ್ಯ ರಸ್ತೆ ಮತ್ತು ಚರಂಡಿ ಅಭಿವೃದ್ಧಿ ಕಾಮಗಾರಿ | | 25.00 |
| 61 | ಮಾರ್ವಡಿ ಗಲ್ಲಿಯ ಮುಖ್ಯ ರಸ್ತೆ ಮತ್ತು ಚರಂಡಿ ಅಭಿವೃದ್ಧಿ ಕಾಮಗಾರಿ | | 10.00 |
| 62 | ಇಸ್ಲಾಮಬಾದ್ ಮತ್ತು ಬಿಲಾಲಾಬಾದ್‌ನಲ್ಲಿ ಮುಖ್ಯ ರಸ್ತೆ ಮತ್ತು ಚರಂಡಿ ಅಭಿವೃದ್ಧಿ ಕಾಮಗಾರಿ | | 25.00 |
| 63 | ಚಪ್ಪಲ ಬಜಾರದಿಂದ ತಿರಂದಾಜ ಟಾಕೀಜವರೆಗೆ ಮುಖ್ಯ ರಸ್ತೆ ಮತ್ತು ಚರಂಡಿ ಅಭಿವೃದ್ಧಿ ಕಾಮಗಾರಿ | | 26.00 |
| 64 | ಆನಂದ ಹೋಟೆಲ್‌ದಿಂದ ರೋಟರಿ ಕ್ಲಬ್ ರಸ್ತೆಯವರೆಗೆ ಮುಖ್ಯ ರಸ್ತೆ ಮತ್ತು ಚರಂಡಿ ಅಭಿವೃದ್ಧಿ ಕಾಮಗಾರಿ | | 25.00 |
| 65 | ಹೀರಾಪೂರ ಪ್ರದೇಶದಲ್ಲಿ ಮುಖ್ಯ ರಸ್ತೆ ಮತ್ತು ಚರಂಡಿ ಅಭಿವೃದ್ಧಿ ಕಾಮಗಾರಿ | | 24.00 |
| 66 | ಬಸವನಗರ ಪ್ರದೇಶದಲ್ಲಿ ಮುಖ್ಯ ರಸ್ತೆ ಮತ್ತು ಚರಂಡಿ ಅಭಿವೃದ್ಧಿ ಕಾಮಗಾರಿ | | 25.00 |
| 67 | ಬಂಬೂ ಬಜಾರದಲ್ಲಿಯ ಮುಖ್ಯ ರಸ್ತೆ ಮತ್ತು ಚರಂಡಿ ಅಭಿವೃದ್ಧಿ ಕಾಮಗಾರಿ | | 25.00 |
| 68 | ಜಮ್ ಜಮ್ ಕಾಲೋನಿಯಲ್ಲಿಯ ಮುಖ್ಯ ರಸ್ತೆ ಮತ್ತು ಚರಂಡಿ ಅಭಿವೃದ್ಧಿ ಕಾಮಗಾರಿ | | 22.00 |
| 69 | ವಿದ್ಯಾನಗರ ಸಂಜಯವಾಣಿ ದಿನಪತ್ರಿಕೆಯ ಹಿಂದುಗಡೆಯ ಮುಖ್ಯ ರಸ್ತೆ ಮತ್ತು ಚರಂಡಿ ಅಭಿವೃದ್ಧಿ ಕಾಮಗಾರಿ | | 23.00 |
| 70 | ಚಪ್ಪಲ ಬಜಾರದಿಂದ ದರ್ಗಾ ಮುಖ್ಯ ರಸ್ತೆ ಮತ್ತು ಚರಂಡಿ ಅಭಿವೃದ್ಧಿ ಕಾಮಗಾರಿ | | 25.00 |
| 71 | ಬಾಪೂನಗರ ಮತ್ತು ಸುಂದರ ನಗರ ಮುಖ್ಯ ರಸ್ತೆ ಮತ್ತು ಚರಂಡಿ ಅಭಿವೃದ್ಧಿ ಕಾಮಗಾರಿ | | 25.00 |
| 72 | ಜೈನಗರ 60 ಅಡಿಯ ಮುಖ್ಯ ರಸ್ತೆ ಮತ್ತು ಚರಂಡಿ ಅಭಿವೃದ್ಧಿ ಕಾಮಗಾರಿ | | 25.00 |
| 73 | ವೆಂಕಟೇಶ್ವರ ನಗರ ಮುಖ್ಯ ರಸ್ತೆ ಮತ್ತು ಚರಂಡಿ ಅಭಿವೃದ್ಧಿ ಕಾಮಗಾರಿ | | 25.00 |
| 74 | ರುದ್ರವಾಡಿ ಆಸ್ಪತ್ರೆಯಿಂದ ಪ್ರೀಯಾ ವೀಡಿಯೋ ಮುಖ್ಯ ರಸ್ತೆ ಮತ್ತು ಚರಂಡಿ ಅಭಿವೃದ್ಧಿ ಕಾಮಗಾರಿ | | 22.00 |
| 75 | ಗಂಗಾನಗರ ಅಭಿವೃದ್ಧಿ ಕಾಮಗಾರಿ | | 15.00 |
| 76 | ಹೆಚ್ಚುವರಿಯಾಗಿ ಕೊರಂಟಿ ಹನುಮಾನ ದೇವಸ್ಥಾನದ ಅಭಿವೃದ್ಧಿ ಕಾಮಗಾರಿ | | 2.50 |
| 77 | ಮಹಮದಿ ಮಜ್ಜಿದ್ ರಾಘವೇಂದ್ರ ಕಾಲೋನಿ 2ನೇ ಕ್ರಾಸ್‌ನ ರಸ್ತೆ ಮತ್ತು ಚರಂಡಿ ಅಭಿವೃದ್ಧಿ ಕಾಮಗಾರಿ | | 25.00 |
| | ಒಟ್ಟು | | 2341.00 |
| 78 | ದಿನಾಂಕ 23-12-2010 ರಿಂದ 01-01-2011 ರವರೆಗೆ 10 ದಿನಗಳ ಕಾಲ ನಡೆದ "ಕಲಬುರ್ಗಿ ಕಂಪು" ಕಾರ್ಯಕ್ರಮದ ಅಡಿ ತೆಗೆದುಕೊಂಡ ಕಾಮಗಾರಿಗಳು | | 100.00 |
| | ಎಲ್ಲಾ ಕಾಮಗಾರಿಗಳ (1 ರಿಂದ 77) ಒಟ್ಟು ಮೊತ್ತ | | 7500.00 |

2. ಈ ಅನುಮೋದನೆಯನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ನೀಡಲಾಗಿದೆ.

1) ಸರ್ಕಾರದ ಆದೇಶ ಸಂಖ್ಯೆ : ನಅಇ 167 ಎಬಿಸಿ 2010, ದಿನಾಂಕ : 13-08-2010ರಲ್ಲಿ ಸ್ಪಷ್ಟಪಡಿಸಿರುವಂತೆ ರೂ. 100 ಕೋಟಿ ವಿಶೇಷ ಅನುದಾನದ 2ನೇ ಹಂತದಲ್ಲಿ ಕೈಗೊಳ್ಳಲಾಗುವ ಕಾಮಗಾರಿಗಳಿಗೆ ಸಂಬಂಧಿಸಿದಂತೆ ವೆಚ್ಚವನ್ನು 2011 ರಿಂದ 2013-14ರ ಆರ್ಥಿಕ ವರ್ಷಗಳಲ್ಲಿ ಸಮನಾಗಿ ಭಾಗ ಮಾಡಿ ವ್ಯಯಿಸತಕ್ಕದ್ದು. ಅದರಂತೆ ರೂ. 100 ಕೋಟಿ ಅನುದಾನವನ್ನು ಈ ಮೂರು ಆರ್ಥಿಕ ವರ್ಷಗಳಲ್ಲಿ ಸಮನಾಗಿ ಭಾಗ ಮಾಡಿ ಬಿಡುಗಡೆ ಮಾಡಲಾಗುವುದು.

2) ಈ ಅನುಮೋದನೆಯನ್ನು ಕಾಮಗಾರಿಗಳ ಪಟ್ಟಿಗೆ ಮಾತ್ರ ನೀಡಲಾದ ಅನುಮೋದನೆ ಎಂದು ಪರಿಗಣಿಸುವುದು. ಈ ಅನುಮೋದನೆಯನ್ನು ಕಾಮಗಾರಿಗಳ ಪಟ್ಟಿಗೆ ಅಥವಾ ಪಟ್ಟಿಯಲ್ಲಿನ ಯಾವುದೇ ಕಾಮಗಾರಿಗೆ ನೀಡಿರುವ ಆಡಳಿತಾತ್ಮಕ ಅನುಮೋದನೆ ಎಂದು ಪರಿಗಣಿಸುವಂತಿಲ್ಲ.

3) ಈ ಕ್ರಿಯಾ ಯೋಜನೆಯಲ್ಲಿ ತೆಗೆದುಕೊಳ್ಳಲಾಗುವ ಕಾಮಗಾರಿಗಳಿಗೆ ಸರ್ಕಾರದ/ಸ್ಥಳೀಯ ಸಂಸ್ಥೆಯ ಅಥವಾ ಇನ್ನಿತರ ಮೂಲಗಳಿಂದ ಯಾವುದೇ ವೆಚ್ಚ ಮಾಡಿರುವುದಿಲ್ಲವೆಂಬುದನ್ನು ಪೂರ್ವಾನ್ವಯವಾಗಿ ಖಚಿತಪಡಿಸಿ ಕೊಳ್ಳತಕ್ಕದ್ದು.

4) ಸರ್ಕಾರದ ಆದೇಶ ಸಂಖ್ಯೆ : ನ.ಆ.ಇ. 167 ಎಸಿಬಿ 2010, ದಿನಾಂಕ : 13–08–2010ರಲ್ಲಿ ಹೇಳಲಾದ ಸೂಚನೆ/ಷರತ್ತುಗಳನ್ನು ಪಾಲಿಸುವುದು.

5) ಕರ್ನಾಟಕ ಪೌರ ನಿಗಮಗಳ ನಿಯಮಗಳು, 1977ರಲ್ಲಿ ನೀಡಲಾಗಿರುವ ಸೂಚನೆಗಳಂತೆ ಪ್ರತಿ ಕಾಮಗಾರಿಯ ಅಂದಾಜು ಪಟ್ಟಿಯನ್ನು ತಯಾರಿಸಿ ಅದಕ್ಕೆ ಸಕ್ಷಮ ಪ್ರಾಧಿಕಾರದಿಂದ ಆಡಳಿತಾತ್ಮಕ ಅನುಮೋದನೆಯನ್ನು ಟೆಂಡರ್/ಇ–ಪ್ರೊಕ್ಯೂರ್‌ಮೆಂಟ್ ಪ್ರಕ್ರಿಯೆ ಪ್ರಾರಂಭಿಸುವ ಮೊದಲು ಕಡ್ಡಾಯವಾಗಿ ಪಡೆದುಕೊಳ್ಳತಕ್ಕದ್ದು.

6) ಭೂಸ್ವಾಧೀನ ಪ್ರಕ್ರಿಯೆಗೆ ಸಂಬಂಧಿಸಿದಂತೆ ತತ್ಸಂಬಂಧವಾಗಿ ಕರ್ನಾಟಕ ಭೂಸ್ವಾಧೀನ ಕಾಯ್ದೆ ಮತ್ತು ಇತರ ನಿಯಮಗಳಲ್ಲಿ ಹೇಳಲಾದ ಕ್ರಮವನ್ನು ಅನುಸರಿಸಿ ಪ್ರತಿ ಕಾಮಗಾರಿಯ ಭೂಸ್ವಾಧೀನ ಪ್ರಕ್ರಿಯೆಗೆ ಸಂಬಂಧಿಸಿದಂತೆ ಜಿಲ್ಲಾ, ಪ್ರಾದೇಶಿಕ ಮತ್ತು ಸರ್ಕಾರದ ಮಟ್ಟದಲ್ಲಿ ಸಕ್ಷಮ ಪ್ರಾಧಿಕಾರದಿಂದ ಪೂರ್ವಾನ್ವಯವಾಗಿ ಅನುಮೋದನೆ ಪಡೆಯತಕ್ಕದ್ದು.

7) ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ : 40232/2008ರಲ್ಲಿನ ದಿನಾಂಕ : 20–10–2008ರ ತೀರ್ಪಿನಲ್ಲಿ ಹೇಳಿರುವಂತೆ ಪ್ರತಿ ಫಿರ್ಯಾದುದಾರರಿಂದ ಮತ್ತು ಭೂ ಮಾಲೀಕರಿಂದ ಅವರು ಪರಿಹಾರ ಪಡೆಯುವ ಜಮೀನಿನ ಕಾನೂನುಬದ್ಧ ಮಾಲೀಕತ್ವವನ್ನು ಹೊಂದಿರುವ ಬಗ್ಗೆ ಮತ್ತು ಅವರು ಯಾವುದೇ ಸಂದರ್ಭದಲ್ಲಿ ಗುಲ್ಬರ್ಗಾ ಮಹಾನಗರಪಾಲಿಕೆಯ ಅಥವಾ ಸರ್ಕಾರದ ಜಮೀನನ್ನು/ಕಟ್ಟಡಗಳನ್ನು ಅತಿಕ್ರಮಿಸಿಕೊಂಡಿಲ್ಲದಿರುವುದನ್ನು ಖಚಿತಪಡಿಸಿಕೊಳ್ಳುವುದು ಮತ್ತು ಆ ಬಗ್ಗೆ ಅವರುಗಳಿಂದ ಅಫಿಡವಿಟ್‌ಗಳನ್ನು ಪಡೆದುಕೊಳ್ಳತಕ್ಕದ್ದು. ಈ ಸಂಬಂಧ ವಿವರಗಳನ್ನು ಪಟ್ಟಿ ಮಾಡಿ ದಾಖಲಾತಿಗಳ ಪ್ರತಿಗಳೊಂದಿಗೆ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

8) ರೂಪಾಯಿ ಎರಡು ನೂರು ಲಕ್ಷ ಮೀರಿರುವ ಕಾಮಗಾರಿಯ ಅಂದಾಜು ಪಟ್ಟಿಗಳಿಗೆ ಸರ್ಕಾರದ ಹಂತದಲ್ಲಿ ಕಡ್ಡಾಯವಾಗಿ ಆಡಳಿತಾತ್ಮಕ ಅನುಮೋದನೆ ಪಡೆದುಕೊಳ್ಳುವುದು.

9) ಭೂಸ್ವಾಧೀನ, ಬಿ.ಎಸ್.ಎನ್.ಎಲ್ ಕೇಬಲ್‌ಗಳ ಸ್ಥಳಾಂತರ, ದಾರಿ ದೀಪಗಳ ಅಭಿವೃದ್ಧಿ ಮತ್ತು ಯುಟಿಲಿಟಿಗಳ ಸ್ಥಳಾಂತರ ಕಾಮಗಾರಿಗಳಿಗೆ ಸಂಬಂಧಪಟ್ಟಂತೆ ಕ್ರಮ ಸಂಖ್ಯೆ 1, 3, 7 ಮತ್ತು 8ರಲ್ಲಿ ಅನುದಾನವನ್ನು ಒಟ್ಟಾರೆಯಾಗಿ ತೋರಿಸಲಾಗಿರುವುದರಿಂದ, ಕಾಮಗಾರಿಗಳಿಗೆ ಟೆಂಡರ್ ಕರೆಯುವ ಮೊದಲು ವಿವರವಾದ ಕಾಮಗಾರಿಗಳ ಪಟ್ಟಿಯನ್ನು ತಯಾರಿಸಿ ಅದಕ್ಕೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆಯುವುದು.

10) ಈ ಅನುದಾನದ ಅಡಿ ಕಾಮಗಾರಿಗಳನ್ನು ನಿರ್ವಹಿಸುವ ಸಲುವಾಗಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ಅದರಡಿ ರಚಿಸಿರುವ ನಿಯಮಗಳು ಮತ್ತು ಹೊರಡಿಸಲಾದ ಸೂಚನೆಗಳಲ್ಲಿನ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ 20 ಇಜಿವಿ 2009(4), ದಿನಾಂಕ : 13–07–2009 ರಲ್ಲಿನ ಎಲ್ಲಾ ಅಂಶಗಳನ್ನು ಮತ್ತು ಕಟ್ಟುನಿಟ್ಟಾಗಿ ಪಾಲಿಸಿ ಟೆಂಡರ್ ಪ್ರಕ್ರಿಯೆಯನ್ನು ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕಡ್ಡಾಯವಾಗಿ ಕೈಗೊಳ್ಳುವುದು.

3. ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಆಇ 1 ಟಿಎಫ್‌ಪಿ 2008, ದಿನಾಂಕ : 16–05–2008 ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ಪ್ರದತ್ತವಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ರೇಣುಕಾರಾಧ್ಯ**

ಪಿ.ಆರ್. ನಂ. 1168

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಬೆಳಗಾವಿ ಜಿಲ್ಲೆ ಹಾಗೂ ತಾಲ್ಲೂಕಿನ ಅಲತಗಾ ಗ್ರಾಮದ (ಸೈಟ್–2) ಮಾರ್ಕಂಡೇಯ ನದಿಗೆ ಅಡ್ಡಲಾಗಿ ಬ್ಯಾರೇಜ್ ಸಹಿತ ಸೇತುವೆ ನಿರ್ಮಾಣ ಕಾಮಗಾರಿಯ ಟೆಂಡರ್ ಕುರಿತು.

**ಓದಲಾಗಿದೆ:**

1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ರವರ ಪತ್ರದ ಕ್ರಮಾಂಕ:ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–1/2011–12/1942, ದಿನಾಂಕ: 06/04/2011
2. ಸರ್ಕಾರದ ಆದೇಶ ಸಂಖ್ಯೆ ಸನೀಇ 236 ಮಸಾವಿ 2009(3), ದಿನಾಂಕ: 09/07/2010.

**ಪ್ರಸ್ತಾವನೆ:**

ಬೆಳಗಾವಿ ಜಿಲ್ಲೆ ಹಾಗೂ ತಾಲ್ಲೂಕಿನ ಅಲತಗಾ ಗ್ರಾಮದ (ಸೈಟ್–2) ಮಾರ್ಕಂಡೇಯ ನದಿಗೆ ಅಡ್ಡಲಾಗಿ ಬ್ಯಾರೇಜ್ ಸಹಿತ ಸೇತುವೆ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2)ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಎ.ಐ.ಬಿ.ಪಿ ಕಾರ್ಯಕ್ರಮದಡಿ ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ಕೋರಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 03/11/2010 |
| ಬೆಳಗಾವಿ ಜಿಲ್ಲಾ ಟೆಂಡರ್ ಬುಲೆಟಿನ್ | 08/11/2010 |
| ಸಂಯುಕ್ತ ಕರ್ನಾಟಕ ದಿನ ಪತ್ರಿಕೆ | 13/11/2010 |
| ಕನ್ನಡ ಪ್ರಭಾ ದಿನ ಪತ್ರಿಕೆ | 13/11/2010 |
| ಡೆಕ್ಕನ್ ಹೆರಾಲ್ಡ್ ಆಂಗ್ಲ ದಿನ ಪತ್ರಿಕೆ | 12/11/2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು, ಇವರು ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್ ಅನ್ನು ದಿನಾಂಕ: 22/12/2010ರಂದು ತೆರೆಯಲಾಗಿದ್ದು, ವಿವರಗಳು ಕೆಳಕಂಡಂತಿವೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ.1,24,46,952/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ.1,54,46,923/– |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಮಹಾಂತ ಕನ್‌ಸ್ಟ್ರಕ್ಷನ್ಸ್, ಪ್ರಥಮ ದರ್ಜೆ ಗುತ್ತಿಗೆದಾರರು, | 1,76,53,750/– | 41.83 ಹೆಚ್ಚು | 14.286 ಹೆಚ್ಚು |

ಮೇಲ್ಕಂಡಂತೆ ಶ್ರೀ ಮಹಾಂತ ಕನ್‌ಸ್ಟ್ರಕ್ಷನ್ಸ್, ಪ್ರಥಮ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ.14.286 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ: 20/04/2011 ರಂದು ಪತ್ರವನ್ನು ನೀಡಿ ಪರಿಷ್ಕೃತ ದರಗಳ ಮೇಲೆ ಶೇ.10 ರಷ್ಟು ಹೆಚ್ಚಿನ ದರದಲ್ಲಿ ಕಾಮಗಾರಿಯನ್ನು ನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ.1,54,46,923/–ಗಳ ಮೇಲೆ ಶೇ.7 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ.1,65,28,207/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 26 ಅಪಿಬಂ 2011 (ತಾಂತ್ರಿಕ) ಬೆಂಗಳೂರು, ದಿನಾಂಕ: 26ನೇ ಏಪ್ರಿಲ್, 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ ಹಾಗೂ ತಾಲ್ಲೂಕಿನ ಅಲತಗಾ ಗ್ರಾಮದ (ಸೈಟ್–2) ಮಾರ್ಕಂಡೇಯ ನದಿಗೆ ಅಡ್ಡಲಾಗಿ ಬ್ಯಾರೇಜ್ ಸಹಿತ ಸೇತುವೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,54,46,923/–ಗಳ ಮೇಲೆ ಶೇ.7 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,65,28,207/–ಗಳಿಗೆ (ಒಂದು ಕೋಟಿ ಅರವತ್ತೈದು ಲಕ್ಷದ ಇಪ್ಪತ್ತೆಂಟು ಸಾವಿರದ ಎರಡು ನೂರ ಏಳು ರೂಪಾಯಿಗಳು ಮಾತ್ರ) ಶ್ರೀ ಮಹಾಂತ ಕನ್‌ಸ್ಟ್ರಕ್ಷನ್ಸ್, ಪ್ರಥಮ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1201

**ವಿಷಯ:** ಹಾವೇರಿ ಜಿಲ್ಲೆ ಹಾಗೂ ತಾಲ್ಲೂಕಿನ ಹಾವನೂರ ಏತ ನೀರಾವರಿ ಯೋಜನೆಗೆ ಗುತ್ತಲ ಉಪ ಕೇಂದ್ರದಿಂದ ಎಕ್ಸ್‌ಪ್ರೆಸ್ ಫೀಡರ್ ಲೈನ್ ನಿರ್ಮಾಣ ಕಾಮಗಾರಿಯ ಟೆಂಡರ್ ಕುರಿತು.

**ಓದಲಾಗಿದೆ:**
1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ರವರ ಪತ್ರದ ಕ್ರಮಾಂಕ:ಮುಇಂ/ ಸನೀ(ಉ)ವಲಯ/ಬಿಜೆಪಿ/ಎಇ–3/2010–11/1349, ದಿನಾಂಕ: 10/03/2011
2. ಸರ್ಕಾರದ ಆದೇಶ ಸಂಖ್ಯೆ ಸನೀಇ 17 ಏನೀಯೋ 2008, ದಿನಾಂಕ: 28/03/2008.

**ಪ್ರಸ್ತಾವನೆ:**

ಹಾವೇರಿ ಜಿಲ್ಲೆ ಹಾಗೂ ತಾಲ್ಲೂಕಿನ ಹಾವನೂರ ಏತ ನೀರಾವರಿ ಯೋಜನೆಯ ರೂ. 165.00 ಲಕ್ಷದ ಮೂಲ ಅಂದಾಜಿಗೆ ಉಲ್ಲೇಖ (2)ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಪೈಕಿ ಸಿವಿಲ್ ಕಾಮಗಾರಿಯನ್ನು ಪ್ರತ್ಯೇಕವಾಗಿ ಕೈಗೊಳ್ಳಲಾಗಿರುತ್ತದೆ. ಮಂಜೂರಾದ ಅಂದಾಜಿನಲ್ಲಿ ಒದಗಿಸಿರುವ ಇಡಿಗಂಟಿನ ಎದುರಾಗಿ ಎಕ್ಸ್‌ಪ್ರೆಸ್ ಫೀಡರ್ ಲೈನ್ ನಿರ್ಮಾಣ ಕಾಮಗಾರಿಯ ಉಪ ಅಂದಾಜಿಗೆ ಪ್ರತ್ಯೇಕವಾಗಿ ಅನುಮೋದನೆಯನ್ನು ಪಡೆದುಕೊಂಡು ಈ ಕಾಮಗಾರಿಯನ್ನು ಕೈಗೊಳ್ಳಲು ಟೆಂಡರ್ ಕರೆಯಲಾಗಿರುತ್ತದೆ. ಬೆಳಗಾವಿ ಸಣ್ಣ ನೀರಾವರಿ ವಿಭಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 14/01/2011 |
| ಕನ್ನಡ ಪ್ರಭಾ ದಿನ ಪತ್ರಿಕೆ | 18/01/2011 |
| ಸಂಯುಕ್ತ ಕರ್ನಾಟಕ ದಿನ ಪತ್ರಿಕೆ | 19/01/2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು, ಇವರ ಟೆಂಡರ್ ತೆರೆದು ಪರಿಶೀಲಿಸಲಾಗಿದ್ದು, ವಿವರಗಳು ಕೆಳಕಂಡಂತಿವೆ.

| | | |
|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ<br>ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | ರೂ.20,25,363/- |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಮಂಜುನಾಥ ಆರ್. ಚುಳಕಿ ಗುತ್ತಿಗೆದಾರರು | 25,99,572/- | 28.35 ಹೆಚ್ಚು |

ಮೇಲ್ಕಂಡಂತೆ ಶ್ರೀ ಮಂಜುನಾಥ ಆರ್. ಚುಳಕಿ, ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 28.35ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ: 08/04/2011ರಂದು ಪತ್ರವನ್ನು ನೀಡಿ ಪರಿಷ್ಕೃತ ದರಗಳ ಮೇಲೆ ಶೇ. 14.95ರಷ್ಟು ಹೆಚ್ಚಿನ ದರದಲ್ಲಿ ಕಾಮಗಾರಿಯನ್ನು ನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ಈ ಟೆಂಡರ್‌ನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 20,25,363/-ಗಳ ಮೇಲೆ ಶೇ. 10ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 22,27,899/-ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 07 ಏನಿಯೋ 2011 (ತಾಂತ್ರಿಕ) ಬೆಂಗಳೂರು, ದಿನಾಂಕ: 26ನೇ ಏಪ್ರಿಲ್, 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾವೇರಿ ಜಿಲ್ಲೆ ಹಾಗೂ ತಾಲ್ಲೂಕಿನ ಹಾವನೂರ ಏತ ನೀರಾವರಿ ಯೋಜನೆಗೆ ಗುತ್ತಲ ಉಪ ಕೇಂದ್ರದಿಂದ ಎಕ್ಸ್‌ಪ್ರೆಸ್ ಫೀಡರ್ ಲೈನ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 20,25,363/-ಗಳ ಮೇಲೆ ಶೇ. 10ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 22,27,899/-ಗಳಿಗೆ (ಇಪ್ಪತ್ತೆರಡು ಲಕ್ಷದ ಇಪ್ಪತ್ತೇಳು ಸಾವಿರದ ಎಂಟು ನೂರ ತೊಂಭತ್ತೊಂಭತ್ತು ರೂಪಾಯಿಗಳು ಮಾತ್ರ) ಶ್ರೀ ಮಂಜುನಾಥ ಆರ್. ಚುಳಕಿ, ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪಿ.ಆರ್. 1202

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ:** ಶಿವಮೊಗ್ಗ ಜಿಲ್ಲೆ, ತೀರ್ಥಹಳ್ಳಿ ತಾಲ್ಲೂಕು, ಕಾಸರವಳ್ಳಿ ಗ್ರಾಮದ ಹತ್ತಿರ ತುಂಗಾ ನದಿಯಿಂದ ಏತ ನೀರಾವರಿ ಕಾಮಗಾರಿಯ ಟೆಂಡರ್ ಕುರಿತು.

**ಓದಲಾಗಿದೆ:**
1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ಪತ್ರದ ಕ್ರಮಾಂಕ: ಮುಸ(ದ)/ತಾಂ.3/ಸ.ಇಂ.8/ಶಿವಮೊಗ್ಗ/ಇ-ಟೆಂಡರ್/2010-11/1510, ದಿನಾಂಕ: 22/03/2011.
2. ಸರ್ಕಾರದ ಆದೇಶ ಸಂಖ್ಯೆ ಸನೀಇ 06 ನಯೋಕಾ 2009, ದಿನಾಂಕ: 16/04/2010.

**ಪ್ರಸ್ತಾವನೆ:**

ಶಿವಮೊಗ್ಗ ಜಿಲ್ಲೆ, ತೀರ್ಥಹಳ್ಳಿ ತಾಲ್ಲೂಕಿನ ಕಾಸರವಳ್ಳಿ ಗ್ರಾಮದ ಹತ್ತಿರ ತುಂಗಾ ನದಿಯಿಂದ ಏತ ನೀರಾವರಿ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2)ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಶಿವಮೊಗ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ 3ನೇ ಬಾರಿಗೆ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 07/01/2011 |
| ಪ್ರಜಾವಾಣಿ ಮತ್ತು ಟೈಮ್ಸ್ ಆಫ್ ಇಂಡಿಯಾ ದಿನ ಪತ್ರಿಕೆ | 14/01/2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು, ಇವರು ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್ ಅನ್ನು ದಿನಾಂಕ: 27/01/2011 ತೆರೆಯಲಾಗಿದ್ದು, ವಿವರಗಳು ಕೆಳಕಂಡಂತಿವೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | ರೂ.1,22,37,135/– | |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | ರೂ.1,57,20,303/– | |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಎಸ್. ಕೆ. ಧರ್ಮೇಶ್, 1ನೇ ದರ್ಜೆ ಗುತ್ತಿಗೆದಾರರು, ತೀರ್ಥಹಳ್ಳಿ | 1,81,64,994 | 48.44 ಹೆಚ್ಚು | 15.55 ಹೆಚ್ಚು |

ಮೇಲ್ಕಂಡಂತೆ ಶ್ರೀ ಎಸ್. ಕೆ. ಧರ್ಮೇಶ್, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ.15.55ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ: 20/04/2011ರಂದು ಪತ್ರವನ್ನು ನೀಡಿ ಪರಿಷ್ಕೃತ ದರಗಳ ಮೇಲೆ ಶೇ.8.50ರಷ್ಟು ಹೆಚ್ಚಿನ ದರದಲ್ಲಿ ಕಾಮಗಾರಿಯನ್ನು ನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ.1,57,20,303/–ಗಳ ಮೇಲೆ ಶೇ.8.5ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ.1,70,56,529/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 12 ಏನೀಯೋ 2011 (ತಾಂತ್ರಿಕ) ಬೆಂಗಳೂರು, ದಿನಾಂಕ: 26ನೇ ಏಪ್ರಿಲ್, 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶಿವಮೊಗ್ಗ ಜಿಲ್ಲೆ, ತೀರ್ಥಹಳ್ಳಿ ತಾಲ್ಲೂಕಿನ ಕಾಸರವಳ್ಳಿ ಗ್ರಾಮದ ಹತ್ತಿರ ತುಂಗಾ ನದಿಯಿಂದ ಏತ ನೀರಾವರಿ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ.1,57,20,303/– ಗಳ ಮೇಲೆ ಶೇ.8.5ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ.1,70,56,529/–ಗಳಿಗೆ (ಒಂದು ಕೋಟಿ ಎಪ್ಪತ್ತು ಲಕ್ಷದ ಐವತ್ತಾರು ಸಾವಿರದ ಐದು ನೂರ ಇಪ್ಪತ್ತೊಂಭತ್ತು ರೂಪಾಯಿಗಳು ಮಾತ್ರ) ಶ್ರೀ ಎಸ್. ಕೆ. ಧರ್ಮೇಶ್, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1203

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:** ಯುವ ವಿಜ್ಞಾನಿಗಳಿಗೆ ಸಂಶೋಧನೆಗಾಗಿ ಮೂಲಧನ (SMYSR) ನೀಡುವ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ವಿಯಇ 50 ವಿತ್ರಮ 2010, ದಿನಾಂಕ:13/04/2010.
2. ಸರ್ಕಾರದ ಆದೇಶ ಸಂಖ್ಯೆ:ವಿಯಇ 33 ವಿತ್ರಮ 2009, ದಿನಾಂಕ:21/05/2010.
3. ಸರ್ಕಾರದ ಆದೇಶ ಸಂಖ್ಯೆ:ವಿಯಇ 172 ವಿತ್ರಮ 2010, ದಿನಾಂಕ:25/10/2010.
4. ಕಾರ್ಯನಿರ್ವಾಹಕ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ ಇವರ ಪತ್ರ ಸಂಖ್ಯೆ: VGST/P-8/SMYSR/2010–11/615, ದಿ:23.02.2011.
5. ಸರ್ಕಾರದ ಆದೇಶ ಸಂಖ್ಯೆ: ವಿಯಇ 63 ವಿತ್ರಮ 2010, ದಿನಾಂಕ: 13.5.2010.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ ಹಾಗೂ ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳನ್ನು ಮುಂದುವರೆಸಿ 2010-11ನೇ ಸಾಲಿಗೆ ಅನುಷ್ಠಾನಗೊಳಿಸಲು ಆದೇಶ ಹೊರಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ 2010-11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 3425-60-600-0-02 (059) (ಯೋ) ಇದರಡಿಯಲ್ಲಿ ಒಟ್ಟು ರೂ.10.00 ಕೋಟಿಗಳ ಅನುದಾನವನ್ನು ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಯೋಜನೆಗಳಿಗಾಗಿ ಕಲ್ಪಿಸಲಾಗಿದ್ದು, ಇದರ ಅನುಷ್ಠಾನಕ್ಕಾಗಿ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಲಾಗಿದೆ.

ಮೇಲೆ (3)ರಲ್ಲಿ ಓದಲಾದ ಆದೇಶದಲ್ಲಿ 2010-11ನೇ ಸಾಲಿನಲ್ಲಿ ಯುವ ವಿಜ್ಞಾನಿಗಳಿಗೆ ಸಂಶೋಧನೆಗಾಗಿ ಮೂಲ ಧನ ನೀಡುವ ಯೋಜನೆಯ ಅನುಷ್ಠಾನದ (Seed Money to Young Scientists for Research (SMYSR) ಸಲುವಾಗಿ ರೂ.60.00 ಲಕ್ಷಗಳ ಸಹಾಯಾನುದಾನವನ್ನು ಬಿಡುಗಡೆ ಮಾಡಿದೆ.

ಮೇಲೆ (4)ರಲ್ಲಿ ಓದಲಾದ ಕಾರ್ಯನಿರ್ವಾಹಕ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ, ಬೆಂಗಳೂರು. ಇವರ ಪತ್ರದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಮಾರ್ಗಸೂಚಿಯನ್ವಯ ಯುವ ವಿಜ್ಞಾನಿಗಳಿಗೆ ಸಂಶೋಧನೆಗಾಗಿ ಮೂಲ ಧನ ನೀಡುವ ಸಲುವಾಗಿ 2010-11ನೇ ಸಾಲಿಗೆ ಅರ್ಜಿಗಳನ್ನು ಆಹ್ವಾನಿಸಿದ್ದು, ನಿಗದಿಪಡಿಸಿದ ಕೊನೆಯ ದಿನಾಂಕ:14/10/2010ರೊಳಗೆ ಒಟ್ಟು 99 ಅರ್ಜಿಗಳನ್ನು ಸ್ವೀಕರಿಸಲಾಗಿದ್ದು, ಸದರಿ ಅರ್ಜಿಗಳನ್ನು ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹವು ರಚಿಸಿದ ಉಪ-ಸಮಿತಿಯು ದಿನಾಂಕ: 14-02-2011ರಂದು ಸಭೆ ಜರುಗಿಸಿ ಪ್ರಸ್ತಾವನೆಗಳನ್ನು ಪರಿಶೀಲಿಸಿ 8 ಯುವ ಸಂಶೋಧಕರ ಪ್ರಸ್ತಾವನೆಗಳನ್ನು ಆಯ್ಕೆಗೊಳಿಸಿ ಅನುದಾನದ ಬಿಡುಗಡೆಗೆ ಶಿಫಾರಸ್ಸು ಮಾಡಿದ್ದು, ಯುವ ಸಂಶೋಧಕರು ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಶಿಕ್ಷಣ ಸಂಸ್ಥೆಗಳ ಪ್ರಾಂಶುಪಾಲರಿಗೆ/ಸಂಸ್ಥೆಯ ಮುಖ್ಯಸ್ಥರಿಗೆ ಒಟ್ಟು ರೂ. 50.00 ಲಕ್ಷಗಳಲ್ಲಿ ಮೂಲಧನದ ಮೊದಲ ಕಂತಿನ ಅನುದಾನವಾಗಿ ತಲಾ ರೂ. 5.00 ಲಕ್ಷಗಳಂತೆ 8 ಯುವ ಸಂಶೋಧಕರಿಗೆ ಒಟ್ಟು ರೂ.40.00 ಲಕ್ಷಗಳನ್ನು ಮತ್ತು ಉಳಿದ ರೂ. 10.00 ಲಕ್ಷಗಳನ್ನು ಅದೇ 8 ಯುವ ವಿಜ್ಞಾನಿಗಳಿಗೆ ಸಂಶೋಧನೆಯ ಪ್ರಗತಿ ಮತ್ತು ಅಗತ್ಯಗಳಿಗೆ ಅನುಗುಣವಾಗಿ ಎರಡನೇ ಕಂತಿನ ಅನುದಾನವನ್ನು 2010-11ನೇ ಸಾಲಿನಲ್ಲಿ ಬಿಡುಗಡೆಗೊಳಿಸಲು ಹಾಗೂ ಮೇಲೆ ಓದಲಾದ ಸರ್ಕಾರಿ ಆದೇಶ (5)ರನ್ವಯ 2009-10ನೇ ಸಾಲಿನಲ್ಲಿ ಆಯ್ಕೆಗೊಂಡ 10 ಯುವ ವಿಜ್ಞಾನಿಗಳಿಗೆ ಅವರ ಸಂಶೋಧನೆಯ ಪ್ರಗತಿ ಮತ್ತು ಅಗತ್ಯಗಳಿಗೆ ಅನುಗುಣವಾಗಿ 2010-11ನೇ ಸಾಲಿಗೆ ಇನ್ನುಳಿದ ರೂ. 10.00 ಲಕ್ಷಗಳಲ್ಲಿ ಎರಡನೇ ಕಂತಿನ ಅನುದಾನವಾಗಿ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹವು ಹಂಚಿಕೆ ಮಾಡಲು ಸರ್ಕಾರದಿಂದ ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

**2010-11ನೇ ಸಾಲಿನಲ್ಲಿ ಸಂಶೋಧನೆಗಾಗಿ ಮೂಲಧನಕ್ಕಾಗಿ ಆಯ್ಕೆಗೊಂಡ ಯುವ ವಿಜ್ಞಾನಿಗಳು**

| ಕ್ರಮ ಸಂಖ್ಯೆ | ಯುವ ವಿಜ್ಞಾನಿಗಳ ಹೆಸರು ಮತ್ತು ವಿಳಾಸ | ಸಂಶೋಧನಾ ವಿಷಯಗಳು |
|---|---|---|
| 1 | ಡಾ: ಡಿ. ಮಂಜುನಾಥ್<br>ಇ.ಎನ್.ಟಿ. ವಿಭಾಗ, ಕರ್ನಾಟಕ ವೈದ್ಯಕೀಯ ಸಂಸ್ಥೆ (KIMS), ಕರ್ನಾಟಕ ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸ್ ಹುಬ್ಬಳ್ಳಿ - 580 021 | A Comprehensive Aetiopathogenesis and Genetic Study of Nasal Polyposis. |
| 2 | ಡಾ: ಎಮ್. ಚೇತನ್ ಕುಮಾರ್<br>ಡಿಪಾರ್ಟ್‌ಮೆಂಟ್ ಆಫ್ ಬಯೋಟೆಕ್ನಾಲಜಿ, ಜೆ.ಎಸ್.ಎಸ್. ಕಲಾ, ವಾಣಿಜ್ಯ ಮತ್ತು ವಿಜ್ಞಾನ ಕಾಲೇಜು, ಊಟಿ ರಸ್ತೆ, ಮೈಸೂರು-570 025 | Systematic Studies on transport and Localization of Dietary Lutein and Zeaxanthin in relation to Age-related Macular Degeneration |
| 3 | ಡಾ: ಸುನೀಲ್ ಎಸ್. ಮೋರೆ<br>ಜೀವ-ರಸಾಯನಶಾಸ್ತ್ರ ವಿಭಾಗ, ಜೈನ್ ವಿಶ್ವವಿದ್ಯಾಲಯ, ಬೆಂಗಳೂರು-560 011 | Purification and Properties of Insect-selective Sodium channel Inhibiting Toxin from Indian Scorpion Venom : A Potential Biopesticide. |
| 4 | ಡಾ: ಎಸ್. ಬಾಲಾಜಿ<br>ಜೈವಿಕ-ತಂತ್ರಜ್ಞಾನ ವಿಭಾಗ, ಮಣಿಪಾಲ್ ಇನ್ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ, ಮಣಿಪಾಲ್-576 104, ಉಡುಪಿ | In silico Analysis and In Vitro Synthesis of Anticholesteremic Compounds from Turmeric |
| 5 | ಶ್ರೀ ರತ್ನಾಕರ್ ಜಿ. ವೈದ್ಯ<br>ಭೌತಶಾಸ್ತ್ರ ವಿಭಾಗ, ಯುನಿವರ್ಸಿಟಿ ಸೈನ್ಸ್ ಕಾಲೇಜು, ತುಮಕೂರು ವಿಶ್ವವಿದ್ಯಾಲಯ, ತುಮಕೂರು-572 103 | Thermoelectric Properties of Graphene |
| 6 | ಶ್ರೀಮತಿ ಫಾತಿಮಾ ಸಾನ್‌ಜೇರಿ ದಾಸನಕೊಪ್ಪ<br>ಕೆ.ಎಲ್.ಇ. ಕಾಲೇಜು ಆಫ್ ಫಾರ್ಮಸಿ, ಡಿಪಾರ್ಟ್‌ಮೆಂಟ್ ಆಫ್ ಫಾರ್ಮಸಿ, ವಿದ್ಯಾನಗರ, ಹುಬ್ಬಳ್ಳಿ-580 031 | Formulation, in Vitro and in Vivo Evaluation of a Novel in situ gelling guar gum based Ophthalmic Drug Delivery System of an Antibiotic |
| 7 | ಶ್ರೀ ಎಸ್. ಮಹೇಂದ್ರ ಕುಮಾರ್<br>ಮೆಕ್ಯಾನಿಕಲ್ ಇಂಜಿನಿಯರಿಂಗ್ ವಿಭಾಗ, ಆರ್.ವಿ. ಇಂಜಿನಿಯರಿಂಗ್ ಕಾಲೇಜು, ಮೈಸೂರು ರಸ್ತೆ, ಬೆಂಗಳೂರು | Microwave Plasma Synthesis of Nanopowders and their functional Characterization. |

| | | |
|---|---|---|
| 8 | ಡಾ: ಡಿ. ಸುರೇಶ್<br>ಯುನಿವರ್ಸಿಟಿ ಸೈನ್ಸ್ ಕಾಲೇಜು, ಡಿಪಾರ್ಟ್‌ಮೆಂಟ್ ಆಫ್ ಬಯೋಕೆಮಿಸ್ಟ್ರಿ, ತುಮಕೂರು ವಿಶ್ವವಿದ್ಯಾಲಯ ಆವರಣ, ತುಮಕೂರು ವಿಶ್ವವಿದ್ಯಾಲಯ, ತುಮಕೂರು–572 103 | Receptor Ligand Interactions of Human Serum Albumin and Autidepressant Drugs. |

ಉಪ ಸಮಿತಿಯ ಶಿಫಾರಸ್ಸಿನಂತೆ 2010–11ನೇ ಸಾಲಿನಲ್ಲಿ ಯುವ ವಿಜ್ಞಾನಿಗಳಿಗೆ ಸಂಶೋಧನೆಗಾಗಿ ಮೂಲ ಧನ ಒದಗಿಸುವ ಸಲುವಾಗಿ ಮೇಲಿನ ಎಂಟು ಅಭ್ಯರ್ಥಿಗಳ ಪ್ರಸ್ತಾವನೆಗಳನ್ನು ಹಾಗೂ 2009–10ನೇ ಸಾಲಿನಲ್ಲಿ ಆಯ್ಕೆಗೊಂಡ ಯುವ ಸಂಶೋಧಕರಿಗೆ ಎರಡನೇ ಕಂತಾಗಿ ಹಂಚಿಕೆಗೊಳಿಸಲು ಅನುಮೋದಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಿಯಇ 172 ವಿತ್ರಮ 2010, ಬೆಂಗಳೂರು, ದಿನಾಂಕ: 19ನೇ ಏಪ್ರಿಲ್, 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಯೋಜನೆಯಡಿ 2010–11ನೇ ಸಾಲಿನಲ್ಲಿ ಅನುಬಂಧ "ಅ" ರಲ್ಲಿ ವಿವರಿಸಿರುವ ಎಂಟು ಅರ್ಹ ಯುವ ವಿಜ್ಞಾನಿಗಳ ಸಂಶೋಧನೆಗೆ ಮೂಲಧನವನ್ನು ಮತ್ತು 2009–10ನೇ ಸಾಲಿನಲ್ಲಿ ಆಯ್ಕೆಗೊಂಡ 10 ಯುವ ವಿಜ್ಞಾನಿಗಳಿಗೆ ಸಂಶೋಧನೆಗಾಗಿ ಮೂಲಧನವನ್ನು ಈ ಕೆಳಕಂಡಂತೆ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹವು ಒದಗಿಸಲು ಈ ಕೆಳಕಂಡ ನಿಬಂಧನೆ ಮೇರೆಗೆ ಸರ್ಕಾರದ ಅನುಮೋದನೆ ನೀಡಲಾಗಿದೆ.

1. 2010–11ನೇ ಸಾಲಿಗೆ ಮೂಲಧನದ ಮೊದಲ ಕಂತಾಗಿ ತಲಾ ರೂ. 5.00 ಲಕ್ಷಗಳಂತೆ ಒಟ್ಟು ರೂ. 40.00 ಲಕ್ಷಗಳನ್ನು 8 ಯುವ ವಿಜ್ಞಾನಿಗಳು ಕಾರ್ಯನಿರ್ವಹಿಸುತ್ತಿರುವ ಶಿಕ್ಷಣ ಸಂಸ್ಥೆಗಳ ಪ್ರಾಂಶುಪಾಲರಿಗೆ/ಮುಖ್ಯಸ್ಥರಿಗೆ ಅನುದಾನವನ್ನು ಬಿಡುಗಡೆಗೊಳಿಸುವುದು ಹಾಗೂ ಸದರಿ 8 ಯುವ ವಿಜ್ಞಾನಿಗಳ ಸಂಶೋಧನೆಯ ಪ್ರಗತಿ ಹಾಗೂ ಅಗತ್ಯತೆಗನುಗುಣವಾಗಿ ಉಪ ಸಮಿತಿಯು ಮೌಲ್ಯಮಾಪನ ಕೈಗೊಂಡು 2ನೇ ಕಂತಿನ ಮೂಲಧನವನ್ನು ನಿಗದಿ ಪಡಿಸಿ ರೂ. 10.00 ಲಕ್ಷಗಳಲ್ಲಿ ಬಿಡುಗಡೆಗೊಳಿಸುವುದು.
2. 2010–11ನೇ ಸಾಲಿನಲ್ಲಿ ಇನ್ನುಳಿದ ರೂ. 10.00 ಲಕ್ಷಗಳ ಅನುದಾನದಲ್ಲಿ ಕಳೆದ 2009–10ನೇ ಸಾಲಿನಲ್ಲಿ ಆಯ್ಕೆಗೊಂಡು ಮೂಲಧನ ಪಡೆದ 10 ಯುವ ವಿಜ್ಞಾನಿಗಳಿಗೆ ಅವರ ಸಂಶೋಧನೆಯ ಪ್ರಗತಿ ಹಾಗೂ ಅಗತ್ಯಕ್ಕೆ ತಕ್ಕಂತೆ ಎರಡನೇ ಹಾಗೂ ಕೊನೆಯ ಕಂತಿನ ಮೂಲಧನವನ್ನು ನಿಗದಿಪಡಿಸಿ ಅನುದಾನವನ್ನು "ಆ" ರಲ್ಲಿ ವಿವರಿಸಿದಂತೆ ಬಿಡುಗಡೆ ಮಾಡುವುದು.

**ನಿಬಂಧನೆಗಳು**

1) ಈ ಯೋಜನೆಯ ಅನುಷ್ಠಾನದ ಸಲುವಾಗಿ ಬಿಡುಗಡೆ ಮಾಡುವ ಹಣವು ಸದ್ಬಳಕೆಯಾಗದಿದ್ದರೆ ಹಾಗೂ ಯೋಜನೆ ಅನುಷ್ಠಾನವನ್ನು ಮಧ್ಯದಲ್ಲಿ ರದ್ದುಪಡಿಸಿದರೆ ಸರ್ಕಾರದಿಂದ ನೀಡಲಾದ ಆರ್ಥಿಕ ಸೌಲಭ್ಯವನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಕರಾರಿನಲ್ಲಿ ಸೂಕ್ತ ನಿಬಂಧನೆಗಳನ್ನು ಶಿಕ್ಷಣ ಸಂಸ್ಥೆಗಳಿಗೆ ವಿಧಿಸತಕ್ಕದ್ದು; ಹಾಗೂ ಯೋಜನೆಯನ್ನು ಶಿಕ್ಷಣ ಸಂಸ್ಥೆಗಳು ನಿರ್ವಹಿಸುವ ಬಗ್ಗೆ ಕಾಲ ಕಾಲಕ್ಕೆ ಮೌಲ್ಯಮಾಪನ ಕೈಗೊಳ್ಳಬೇಕು,
2) ಯೋಜನೆಯ ಅನುಷ್ಠಾನಕ್ಕೆ ಶಿಕ್ಷಣ ಸಂಸ್ಥೆಗಳು ಅನುದಾನವನ್ನು ಸದುಪಯೋಗ ಮಾಡಿಕೊಂಡಿದ್ದಕ್ಕೆ ಲೆಕ್ಕ ಪರಿಶೋಧಿತ ಉಪಯೋಗತಾ ಪ್ರಮಾಣ ಪತ್ರಗಳನ್ನು ನಿಗದಿತ ಕಾಲಮಿತಿಯಲ್ಲಿ ಪಡೆದು ಸರ್ಕಾರಕ್ಕೆ ಸಲ್ಲಿಸತಕ್ಕದ್ದು,
3) ಸರ್ಕಾರದಿಂದ ಯಾವ ಉದ್ದೇಶಕ್ಕಾಗಿ ಅನುದಾನ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ: 16/05/2008ರ ಅಡಿಯಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಪ್ರದತ್ತವಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಬೋರಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ವಿಯಇ 172 ವಿತ್ರಮ 2010, ಬೆಂಗಳೂರು ದಿನಾಂಕ: 19ನೇ ಏಪ್ರಿಲ್, 2011**

**ಅನುಬಂಧ – ಅ**

**2010–11ನೇ ಸಾಲಿನ ಯುವ ವಿಜ್ಞಾನಿಗಳ ಆಯ್ಕೆ ಪಟ್ಟಿ**

| ಕ್ರಮ ಸಂಖ್ಯೆ | ಯುವ ವಿಜ್ಞಾನಿಗಳ ಹೆಸರು ಮತ್ತು ವಿಳಾಸ | ಸಂಶೋಧನಾ ವಿಷಯಗಳು |
|---|---|---|
| 1 | ಡಾ: ಡಿ. ಮಂಜುನಾಥ್<br>ಇ.ಎನ್.ಟಿ. ವಿಭಾಗ, ಕರ್ನಾಟಕ ವೈದ್ಯಕೀಯ ಸಂಸ್ಥೆ (KIMS), ಕರ್ನಾಟಕ ಇನ್ಸ್‌ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸ್ ಹುಬ್ಬಳ್ಳಿ – 580 021 | A Comprehensive Aetiopathogenesis and Genetic Study of Nasal Polyposis. |
| 2 | ಡಾ: ಎಮ್. ಚೇತನ್ ಕುಮಾರ್<br>ಡಿಪಾರ್ಟ್‌ಮೆಂಟ್ ಆಫ್ ಬಯೋಟೆಕ್ನಾಲಜಿ, ಜೆ.ಎಸ್.ಎಸ್. ಕಲಾ, ವಾಣಿಜ್ಯ ಮತ್ತು ವಿಜ್ಞಾನ ಕಾಲೇಜು, ಊಟಿ ರಸ್ತೆ, ಮೈಸೂರು–570 025 | Systematic Studies on transport and Localization of Dietary Lutein and Zeaxanthin in relation to Age-related Macular Degeneration |

| ಕ್ರಮ ಸಂಖ್ಯೆ | ಯುವ ವಿಜ್ಞಾನಿಗಳ ಹೆಸರು ಮತ್ತು ವಿಳಾಸ | ಸಂಶೋಧನಾ ವಿಷಯಗಳು |
|---|---|---|
| 3 | ಡಾ: ಸುನೀಲ್ ಎಸ್. ಮೋರೆ<br>ಜೀವ-ರಸಾಯನಶಾಸ್ತ್ರ ವಿಭಾಗ, ಜೈನ್ ವಿಶ್ವವಿದ್ಯಾಲಯ, ಬೆಂಗಳೂರು-560 011 | Purification and Properties of Insect-selective Sodium channel Inhibiting Toxin from Indian Scorpion Venom : A Potential Biopesticide. |
| 4 | ಡಾ: ಎಸ್. ಬಾಲಾಜಿ<br>ಜೈವಿಕ-ತಂತ್ರಜ್ಞಾನ ವಿಭಾಗ, ಮಣಿಪಾಲ್ ಇನ್ಸ್‌ಟಿಟ್ಯೂಟ್ ಆಫ್ ಟೆಕ್ನಾಲಜಿ, ಮಣಿಪಾಲ್-576 104, ಉಡುಪಿ | In silico Analysis and In Vitro Synthesis of Anticholesteremic Compounds from Turmeric |
| 5 | ಶ್ರೀ ರತ್ನಾಕರ್ ಜಿ. ವೈದ್ಯ<br>ಭೌತಶಾಸ್ತ್ರ ವಿಭಾಗ, ಯುನಿವರ್ಸಿಟಿ ಸೈನ್ಸ್ ಕಾಲೇಜು, ತುಮಕೂರು ವಿಶ್ವವಿದ್ಯಾಲಯ, ತುಮಕೂರು-572 103 | Thermoelectric Properties of Graphene |
| 6 | ಶ್ರೀಮತಿ ಫಾತಿಮಾ ಸಾನ್‌ಜೇರಿ ದಾಸನಕೊಪ್ಪ<br>ಕೆ.ಎಲ್.ಇ. ಕಾಲೇಜು ಆಫ್ ಫಾರ್ಮಸಿ, ಡಿಪಾರ್ಟ್‌ಮೆಂಟ್ ಆಫ್ ಫಾರ್ಮಸಿ, ವಿದ್ಯಾನಗರ, ಹುಬ್ಬಳ್ಳಿ-580 031 | Formulation, in Vitro and in Vivo Evaluation of a Novel in situ gelling guar gum based Ophthalmic Drug Delivery System of an Antibiotic |
| 7 | ಶ್ರೀ ಎಸ್. ಮಹೇಂದ್ರ ಕುಮಾರ್<br>ಮೆಕ್ಯಾನಿಕಲ್ ಇಂಜಿನಿಯರಿಂಗ್ ವಿಭಾಗ, ಆರ್.ವಿ. ಇಂಜಿನಿಯರಿಂಗ್ ಕಾಲೇಜು, ಮೈಸೂರು ರಸ್ತೆ, ಬೆಂಗಳೂರು | Microwave Plasma Synthesis of Nanopowders and their functional Characterization. |
| 8 | ಡಾ: ಡಿ. ಸುರೇಶ್<br>ಯುನಿವರ್ಸಿಟಿ ಸೈನ್ಸ್ ಕಾಲೇಜು, ಡಿಪಾರ್ಟ್‌ಮೆಂಟ್ ಆಫ್ ಬಯೋಕೆಮಿಸ್ಟ್ರಿ, ತುಮಕೂರು ವಿಶ್ವವಿದ್ಯಾಲಯ ಆವರಣ, ತುಮಕೂರು ವಿಶ್ವವಿದ್ಯಾಲಯ, ತುಮಕೂರು-572 103 | Receptor Ligand Interactions of Human Serum Albumin and Autidepressant Drugs. |

**ಅನುಬಂಧ – ಆ**

**2009-10ನೇ ಸಾಲಿನ ಯುವ ವಿಜ್ಞಾನಿಗಳ ಆಯ್ಕೆ ಪಟ್ಟಿ**

| Sl. No. | Awarded Name and Designation | Themes/Title |
|---|---|---|
| 1 | Dr. Ananda S.<br>Senior Lecturer, Department of Biotechnology, P.E.S. Institute of Technology, Bangalore | "Rapid Biosynthesis of Silver Nanoparticle using Medicinal Plant-Characterization and their Interaction on Leukaemia Cell lines" |
| 2 | Dr. J. Francis Borgio,<br>Lecturer, P.G. Studies and Research Department of Microbiology, St. Joseph's College (Autonomous), Bangalore | "Distribution of Metarhizium anisopliae in the vicinity of Western Ghats of Karnataka, its bio efficacy and detection of pr1 virulent gene among the isolates of Metarhizium anisopliae" |
| 3 | Dr. Ganesha Achary,<br>Lecturer, Department of Chemisty, I.D.S.G. Government First Grade College, Chikmagalur | "Adsorption Kinetics, Thermodynamics and Sensing of Hazardous Effluents" |
| 4 | Dr. Madhura K.R.<br>Lecturer, Department of Mathematics, M.E.S. College for Arts, Science and Commerce, Malleswaram, Bangalore | "Fluid Mechanics – Study of dusty viscous fluid flows" |
| 5 | Dr. B.J. Madhu,<br>Assistant Professor, Department of Post Graduate Studies in Physics Government Science College, Chitradurga | "Preparation, Characterization and Electrical studies on Selenium and Tellurium based thin films for applications in photovoltaic energy conversion devices" |
| 6 | Smt. Manjula D.<br>Lecturer, Department of Pharmaceutics, Dayananda Sagar College of Pharmacy, Bangalore | "Development and Evaluation of Membrane Moderated Transdermal therapeutic systems containing few NSAID'S for the Treatment of Arthritis" |
| 7 | Dr. Peralam Yegneswaran Prakash,<br>Lecturer, Department of Microbiology, Kasturba Medical College, Manipal University, Manipal | "Molecular epidemiology and Mating type allete analysis to determine clonol population structure among clinical and environmental isolates of Cryptococcus neoformans species complex in Coastal Karnataka" |

| | | |
|---|---|---|
| 8 | Shri Poornesh P.<br>Lecturer, Department of Physics, Manipal Institute of Technology, Manipal University, Manipal | "Low power optical limiting studies on organic materials using CW laser illumination" |
| 9 | Shri K.R. Sanjay,<br>Lecturer, Department of Biotechnology,<br>Sri Jayachamarajendra College of Engineering, Mysore | "Microbial production of Dihydroxyacetone from Glycerin produced in the manufacture of Biodiesel" |
| 10 | Dr. Veeranna Gowda V.C.,<br>Lecturer, Department of Physics, Government College for Women, Chintamani | "Materials for IR Windows and Optics:<br>A view of its Structure, Property and Applications" |

**ಕೆ. ಬೋರಲಿಂಗಯ್ಯ**

ಪಿ.ಆರ್. 1204

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ವಿಷಯ:** ವಿಜ್ಞಾನ ಶಿಕ್ಷಣದ ಸೃಜನಶೀಲ ಕೇಂದ್ರಗಳನ್ನು ಸ್ಥಾಪಿಸುವ (Centres of Innovative Science Education (CISE) ಯೋಜನೆಯನ್ನು ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ವಿಯಇ 50 ವಿತ್ರಮ 2010, ದಿನಾಂಕ:13/04/2010.
2) ಸರ್ಕಾರದ ಆದೇಶ ಸಂಖ್ಯೆ:ವಿಯಇ 33 ವಿತ್ರಮ 2009, ದಿನಾಂಕ:21/05/2010.
3) ಸರ್ಕಾರದ ಆದೇಶ ಸಂಖ್ಯೆ:ವಿಯಇ 173 ವಿತ್ರಮ 2010, ದಿನಾಂಕ:15/10/2010 ಮತ್ತು ದಿನಾಂಕ: 19.10.2010.
4) ಕಾರ್ಯನಿರ್ವಾಹಕ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ ಇವರ ಪತ್ರ ಸಂಖ್ಯೆ: VGST/P-10/CISE/2010–11/616, ದಿ:19.02.2011.
5) ಸರ್ಕಾರದ ಆದೇಶ ಸಂಖ್ಯೆ: ವಿಯಇ 31 ವಿತ್ರಮ 2010, ದಿನಾಂಕ: 18/3/2010 ಮತ್ತು 28/7/2010.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ, ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳನ್ನು ಮುಂದುವರೆಸಿ 2010–11ನೇ ಸಾಲಿಗೆ ಅನುಷ್ಠಾನಗೊಳಿಸಲು ಆದೇಶ ಹೊರಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ 2010–11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 3425–60–600–0–02 (059) (ಯೋ) ಇದರಡಿಯಲ್ಲಿ ಒಟ್ಟು ರೂ.10.00 ಕೋಟಿಗಳ ಅನುದಾನವನ್ನು ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಯೋಜನೆಗಳಿಗಾಗಿ ಕಲ್ಪಿಸಲಾಗಿದ್ದು, ಇದರ ಅನುಷ್ಠಾನಕ್ಕಾಗಿ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಲಾಗಿದೆ.

ಮೇಲೆ (3)ರಲ್ಲಿ ಓದಲಾದ ಆದೇಶಗಳಲ್ಲಿ 2010–11ನೇ ವಿಜ್ಞಾನ ಶಿಕ್ಷಣದ ಸೃಜನಶೀಲ ಕೇಂದ್ರಗಳ ಸ್ಥಾಪಿಸುವ (Centres of Innovative Science Education (CISE) ಯೋಜನೆಯ ಅನುಷ್ಠಾನಕ್ಕಾಗಿ ರೂ.140.00 ಲಕ್ಷಗಳ ಸಹಾಯಾನುದಾನವನ್ನು ಬಿಡುಗಡೆ ಮಾಡಿದೆ.

ಮೇಲೆ (4)ರಲ್ಲಿ ಓದಲಾದ ಕಾರ್ಯನಿರ್ವಾಹಕ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ, ಬೆಂಗಳೂರು. ಇವರ ಪತ್ರದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಮಾರ್ಗಸೂಚಿಯನ್ವಯ 2010–11ನೇ ಸಾಲಿಗೆ ವಿಜ್ಞಾನ ಶಿಕ್ಷಣದ ಸೃಜನಶೀಲ ಕೇಂದ್ರಗಳನ್ನು ಸ್ಥಾಪಿಸುವ (Centres of Innovative Science Education-CISE) ಯೋಜನೆಯ ಅನುಷ್ಠಾನದ ಸಲುವಾಗಿ ನಿಗದಿಪಡಿಸಲಾದ ಕೊನೆಯ ದಿನಾಂಕ: 14/10/2010ರೊಳಗೆ ಒಟ್ಟು 19 ಪ್ರಸ್ತಾವನೆಗಳನ್ನು ಸ್ವೀಕರಿಸಲಾಗಿದ್ದು, ಸದರಿ ಪ್ರಸ್ತಾವನೆಗಳನ್ನು ವಿ.ತಂ.ದಾ.ಸ.ದ ಉಪ–ಸಮಿತಿಯು ದಿನಾಂಕ: 01–02–2011ರಂದು ಉದ್ದೇಶಿತ ಯೋಜನೆಯ ಮಾರ್ಗಸೂಚಿಯನ್ವಯ ಪ್ರಸ್ತಾವನೆಗಳನ್ನು ಪರಿಶೀಲಿಸಿ ಈ ಕೆಳಕಂಡ 10 ಅರ್ಹ ಪ್ರಸ್ತಾವನೆಗಳನ್ನು ಶಿಫಾರಸ್ಸು ಮಾಡಿದ್ದು, ಆಯಾಯ ಸಂಸ್ಥೆಗಳಿಗೆ ಮೊದಲನೇ ಕಂತಾಗಿ ತಲಾ ರೂ.10.00 ಲಕ್ಷಗಳಂತೆ ಒಟ್ಟು ರೂ.100.00 ಲಕ್ಷಗಳನ್ನು ಹಾಗೂ ಮೇಲೆ ಓದಲಾದ (5)ರ ಆದೇಶದ ರೀತ್ಯಾ 2009–10ನೇ ಸಾಲಿನಲ್ಲಿ ಸ್ಥಾಪಿಸಲಾದ 4 ಕೇಂದ್ರಗಳಿಗೆ ತಲಾ ರೂ.10.00 ಲಕ್ಷಗಳಂತೆ ಒಟ್ಟು ರೂ.40.00 ಲಕ್ಷಗಳನ್ನು ಎರಡನೇ ಕಂತಿನ ಅನುದಾನವಾಗಿ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹವು ಹಂಚಿಕೆ ಮಾಡಲು ಸರ್ಕಾರದಿಂದ ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

**2010–11ನೇ ಸಾಲಿಗೆ ಉಪ–ಸಮಿತಿಯು ಶಿಫಾರಸ್ಸು ಮಾಡಿದ 10 ಸಂಸ್ಥೆಗಳ ಪಟ್ಟಿ ಈ ಕೆಳಗೆ ನೀಡಿದೆ**

| Sl. No. | Name & address of the institution/college | Project theme |
|---|---|---|
| 1 | Pooja Bhagavat Memorial Post Graduate Centre, wing of SBRR Mahajana First Grade College, Affil. to University of Mysore, Mysore-570 016 | Isolation and Characterization of Bioremediating Microorganism |

| Sl. No. | Name & address of the institution/college | Project theme |
|---|---|---|
| 2 | Dayananda Sagar College of Engineering Affil. to VTU, Shavige Malleswara Hills, Kumaraswamy Layout, Bangalore – 560 078 | Upradation of Engineering Physics Laboratory |
| 3 | D.E.S.S. Bangurnagar Arts, Science and Commerce College (Affil. to Karnatak University) Dharwad, Dandeli – 581 325 | Innovative Teaching Methods and Research in Syntheses of Active Pharmaceuticals ingredients (API's) and Pulping Aids. |
| 4 | Maratha Mandal's Nathajirao G. Halgekar Institute of Dental Science and Research Centre, Belgaum R.S. No.47A/2, Near K.S.R.P. Ground, Bauxite Road, Belgaum – 590 010 | Oral Microbiota Culture Bank & DNA Library |
| 5 | KLES College of Pharmacy, (Deemed to be University) Vidyanagar, Hubli-580 031 | Pharmacological Screening of traditional Medicines |
| 6 | Sri Dharmastala Manjunatheshwara College of Arts, Science, Commerce and Business Administration, Prabhat Nagar, Honnavar -581 334 (Uttara Kannada) | Establishment of Research facilities in the Science Department to cater to the needs of the Society |
| 7 | Sri Jagadguru Renukacharya College of Science, Arts & Commerce # 9, Race-Course Road, Bangalore -560 009 | Establishment of Resource Recovery Centre for precious metals & valuable chemicals from Dry cells & e-waste materials. |
| 8 | Maharani's Science College for Women, Palace Road, Bangalore -01 | Establishment of Center for Chemical Instrumentation and ICT Learning |
| 9 | Bangalore University, Bangalore Central College Campus, Bangalore -560 001 | Strengthening of Teaching and Research Infrastructure in the Department of Biochemistry, Bangalore University |
| 10 | KLE University, Nehru Nagar, Belgaum-590 010 | Skills Development for Health Care Providers |

ಉಪ ಸಮಿತಿಯ ಶಿಫಾರಸ್ಸಿನಂತೆ 2010–11ನೇ ಸಾಲಿನಲ್ಲಿ ವಿಜ್ಞಾನ ಶಿಕ್ಷಣದ ಸೃಜನಶೀಲ ಕೇಂದ್ರಗಳನ್ನು ಸ್ಥಾಪಿಸುವ ಯೋಜನೆಯ ಅನುಷ್ಠಾನದ ಸಲುವಾಗಿ ಮೇಲಿನ ಹತ್ತು (10) ಶಿಕ್ಷಣ ಸಂಸ್ಥೆಗಳ ಪ್ರಸ್ತಾವನೆಗಳನ್ನು ಅನುಮೋದಿಸಲು ನಿರ್ಧರಿಸಿ ಹಾಗೂ 2009–10ನೇ ಸಾಲಿನಲ್ಲಿ ಸ್ಥಾಪಿಸಲಾದ ನಾಲ್ಕು (4) ಶಿಕ್ಷಣ ಸಂಸ್ಥೆಗಳಿಗೆ 2010–11ನೇ ಸಾಲಿಗೆ ಎರಡನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡಲು ಅನುಮೋದಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಅದೇಶ ಸಂಖ್ಯೆ: ವಿಯಇ 173 ವಿತ್ರಮ 2010, ಬೆಂಗಳೂರು, ದಿನಾಂಕ: 19ನೇ ಏಪ್ರಿಲ್, 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಯೋಜನೆಯಡಿ 2010–11ನೇ ಸಾಲಿನಲ್ಲಿ ಅನುಬಂಧ "ಅ" ರಲ್ಲಿ ವಿವರಿಸಿರುವ ಹತ್ತು (10) ವಿಜ್ಞಾನ ಶಿಕ್ಷಣದ ಸೃಜನಶೀಲ ಕೇಂದ್ರಗಳನ್ನು ಸ್ಥಾಪಿಸುವ (ಅಜಟಣಡಿಜ ಠಜಿ ಖಿಟಿಟಿಠತಚಿಣಬಿತಜ ಖಭಿಜಟಚಿಭಿಜ ಇಜಣಾಭಿಚಿಣಬಂಟ (ಅಖಖಇ) ಯೋಜನೆಯ ಅನುಷ್ಠಾನದ ಸಲುವಾಗಿ ತಲಾ ರೂ.10.00 ಲಕ್ಷಗಳಂತೆ ಒಟ್ಟು ರೂ.100.00 ಲಕ್ಷಗಳನ್ನು ಮೊದಲನೇ ಕಂತಾಗಿ ಹಾಗೂ 2009–10ನೇ ಸಾಲಿನಲ್ಲಿ ಸ್ಥಾಪಿಸಲಾದ 4 ಕೇಂದ್ರಗಳಿಗೆ ಅನುಬಂಧ 'ಆ'ರಲ್ಲಿ ವಿವರಿಸಿದಂತೆ ಎರಡನೇ ಕಂತಿನ ಅನುದಾನವಾಗಿ ತಲಾ ರೂ.10.00 ಲಕ್ಷಗಳಂತೆ ಒಟ್ಟು ರೂ.40.00 ಲಕ್ಷಗಳನ್ನು ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹಕ್ಕೆ ಹಂಚಿಕೆ ಮಾಡಲು ಈ ಕೆಳಕಂಡ ನಿಬಂಧನೆ ಮೇರೆಗೆ ಸರ್ಕಾರದ ಅನುಮೋದನೆ ನೀಡಲಾಗಿದೆ.

1) ವಿಜ್ಞಾನ ಶಿಕ್ಷಣದ ಸೃಜನಶೀಲ ಕೇಂದ್ರಗಳನ್ನು ಸ್ಥಾಪಿಸುವ ಯೋಜನೆಯ ಅನುಷ್ಠಾನದ ಸಲುವಾಗಿ ಬಿಡುಗಡೆ ಮಾಡುವ ಹಣವು ಸದ್ಬಳಕೆಯಾಗದಿದ್ದರೆ ಹಾಗೂ ಯೋಜನೆ ಅನುಷ್ಠಾನವನ್ನು ಮಧ್ಯದಲ್ಲಿ ರದ್ದುಪಡಿಸಿದರೆ ಸರ್ಕಾರದಿಂದ ನೀಡಲಾದ ಆರ್ಥಿಕ ಸೌಲಭ್ಯವನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಕರಾರಿನಲ್ಲಿ ಸೂಕ್ತ ನಿಬಂಧನೆಗಳನ್ನು ಸಂಸ್ಥೆಗಳಿಗೆ ವಿಧಿಸತಕ್ಕದ್ದು,

2) ಈ ಯೋಜನೆಯ ಅನುಷ್ಠಾನಕ್ಕೆ ಅನುದಾನವನ್ನು ಸದುಪಯೋಗ ಮಾಡಿಕೊಂಡಿದ್ದಕ್ಕೆ ಲೆಕ್ಕ ಪರಿಶೋಧಿತ ಉಪಯೋಗತಾ ಪ್ರಮಾಣ ಪತ್ರಗಳನ್ನು ನಿಗದಿತ ಕಾಲಮಿತಿಯಲ್ಲಿ ಪಡೆದು ಸರ್ಕಾರಕ್ಕೆ ಸಲ್ಲಿಸತಕ್ಕದ್ದು,

3) ಸರ್ಕಾರದಿಂದ ಯಾವ ಉದ್ದೇಶಕ್ಕಾಗಿ ಅನುದಾನ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದು,

4) 2009–10ನೇ ಸಾಲಿನಲ್ಲಿ ಸ್ಥಾಪಿಸಿರುವ 4 ವಿಜ್ಞಾನ ಶಿಕ್ಷಣ ಕೇಂದ್ರಗಳಿಗೆ 2010–11ನೇ ಸಾಲಿನಲ್ಲಿ ಎರಡನೇ ಸುತ್ತಿನ ಅನುದಾನ ಬಿಡುಗಡೆ ಮಾಡುವ ಮುನ್ನ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಉಪ ಸಮಿತಿಯಿಂದ ಪ್ರಗತಿಯ ಮೌಲ್ಯಮಾಪನ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ:16/05/2008ರ ಅಡಿಯಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಪ್ರದತ್ತವಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಬೋರಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ವಿಯಇ 173 ವಿತ್ರಮ 2010, ಬೆಂಗಳೂರು ದಿನಾಂಕ: 19–04–2011.**

**ಅನುಬಂಧ – ಅ**

**2010–11ನೇ ಸಾಲಿನ ಆಯ್ಕೆ ಪಟ್ಟಿ**

| SL. NO. | NAME & ADDRESS OF THE INSTITUTION/COLLEGE | PROJECT THEME |
|---|---|---|
| 1 | Pooja Bhagavat Memorial Post Graduate Centre, wing of SBRR Mahajana First Grade College, Affil. to University of Mysore, Mysore-570 016 | Isolation and Characterization of Bioremediating Microorganism |
| 2 | Dayananda Sagar College of Engineering Affil. to VTU, Shavige Malleswara Hills, Kumaraswamy Layout, Bangalore – 78 | Upradation of Engineering Physics Laboratory |
| 3 | D.E.S.S. Bangurnagar Arts, Science and Commerce College (Affil. to Karnatak University) Dharwad, Dandeli – 581 325 | Innovative Teaching Methods and Research in Syntheses of Active Pharmaceuticals ingredients (API's) and Pulping Aids. |
| 4 | Maratha Mandal's Nathajirao G. Halgekar Institute of Dental Science and Research Centre, Belgaum R.S. No.47A/2, Near K.S.R.P. Ground, Bauxite Road, Belgaum – 590 010 | Oral Microbiota Culture Bank & DNA Library |
| 5 | KLES College of Pharmacy (Deemed to be University) Vidyanagar, Hubli-580 031 | Pharmacological Screening of traditional Medicines |
| 6 | Sri Dharmastala Manjunatheshwara College of Arts, Science, Commerce and Business Administration, Prabhat Nagar, Honnavar -581 334 (Uttara Kannada) | Establishment of Research facilities in the Science Department to cater to the needs of the Society |
| 7 | Sri Jagadguru Renukacharya College of Science, Arts & Commerce, # 9, Race-Course Road, Bangalore -560 009 | Establishment of Resource Recovery Centre for precious metals & valuable chemicals from Dry cells & e-waste materials. |
| 8 | Maharani's Science College for Women, Palace Road, Bangalore -01 | Establishment of Center for Chemical Instrumentation and ICT Learning |
| 9 | Bangalore University<br>Bangalore Central College Campus, Bangalore -560 001 | Strengthening of Teaching and Research Infrastructure in the Department of Biochemistry, Bangalore University |
| 10 | KLE University,<br>Nehru Nagar, Belgaum-590 010 | Skills Development for Health Care Providers |

ಅನುಬಂಧ – 'ಅ'

**2009–10ನೇ ಸಾಲಿನ ಆಯ್ಕೆ ಪಟ್ಟಿ**

| Sl. No. | Principal Investigator Name | Themes / Title |
|---|---|---|
| 1 | Dr. Ajith Prasad<br>J.S.S. Banashankari Arts, Commerce and S.K. Gubbi Science College, Vidyagiri, Dharwad | "Pormotion of qualify teaching with modern teaching aids & Improving Science Laboratories and Research activities at undergraduate level" |
| 2 | Dr. B.A. Kagali<br>The Department of Physics, Bangalore University, Bangalore | "Teaching & research activities in the Department of Physics" |
| 3 | Dr. M. Sukumar<br>Department of Instrumentation Technology,<br>Sri Jayachamarajendra College of Engineering (SJCE), Mysore | "Centre of Excellence in MEMS and Bio-MEMS" |
| 4 | DR. B. Yashovarma<br>Department of Physics, Shri Dharmasthala Manjunatheswara College, Ujire | "Establishment of Science Resource Centre" |

**ಕೆ. ಬೋರಲಿಂಗಯ್ಯ**

ಪಿ.ಆರ್. 1205

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ವಿಷಯ:** ಬೆಂಗಳೂರು ಇಂಡಿಯಾ ಬಯೋ 2011ರ ಕಾರ್ಯಕ್ರಮಕ್ಕೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ವಿಯಇ 189 ವಿತ್ರಮ 2010, ದಿನಾಂಕ:19/03/2010.
2. ನಿರ್ದೇಶಕರು (ತಾಂತ್ರಿಕ), ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಬೆಂಗಳೂರು. ಇವರ ಏಕ ಕಡತ ಸಂಖ್ಯೆ:ವಿತಂಇ/ಬಯೋ–11/34/2011, ದಿನಾಂಕ:20.04.2011.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿನ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ, ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳನ್ನು ಮುಂದುವರಿಸಿ, 2011–12ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 3425–60–200–0–01(101)(ಯೋ) ವೈಜ್ಞಾನಿಕ ಸಂಸ್ಥೆಗಳಿಗೆ ಸಹಾಯಾನುದಾನವಾಗಿ ಒಟ್ಟು ರೂ.500.00 ಲಕ್ಷಗಳ ಅನುದಾನವನ್ನು ಕಲ್ಪಿಸಲಾಗಿದೆ.

ವ್ಯವಸ್ಥಾಪಕ ನಿರ್ದೇಶಕರು, ಮೆ: ಎಂ.ಎಂ. ಆಕ್ಟೀವ್, ವಸಂತನಗರ, ಬೆಂಗಳೂರು. ಇವರು ಬೆಂಗಳೂರು ಇಂಡಿಯಾ ಬಯೋ 2011ರ ಕಾರ್ಯಕ್ರಮವನ್ನು 2011ರ ಮೇ 4 ರಿಂದ 6ರವರೆಗೆ ಬೆಂಗಳೂರು ಅಂತಾರಾಷ್ಟ್ರೀಯ ವಸ್ತುಪ್ರದರ್ಶನ ಕೇಂದ್ರ ಬೆಂಗಳೂರು. ಇಲ್ಲಿ ಆಯೋಜಿಸಲು ಉದ್ದೇಶಿಸಿ ರೂ.10.00 ಲಕ್ಷಗಳ ಸಹಾಯಾನುದಾನ ಕೋರಿ ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಸದರಿ ಕಾರ್ಯಕ್ರಮವನ್ನು ಆಯೋಜಿಸಲು ರೂ.5.00 ಲಕ್ಷಗಳನ್ನು ಮಂಜೂರು ಮಾಡುವಂತೆ ಮೇಲೆ (2)ರಲ್ಲಿ ಓದಲಾದ ಏಕ ಕಡತದಲ್ಲಿ ನಿರ್ದೇಶಕರು (ತಾಂತ್ರಿಕ), ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಇವರು ಶಿಫಾರಸ್ಸು ಮಾಡಿರುವುದನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಿಯಇ 63 ವಿತ್ರಮ 2011, ಬೆಂಗಳೂರು, ದಿನಾಂಕ: 26ನೇ ಏಪ್ರಿಲ್, 2011**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಪ್ರಾಯೋಜಕರು, ಮೆ: ಎಂ.ಎಂ. ಆಕ್ಟೀವ್, ಬೆಂಗಳೂರು. ಇವರು ಬೆಂಗಳೂರು ಬಯೋ 2011ರ ಕಾರ್ಯಕ್ರಮವನ್ನು 2011ರ ಮೇ 4 ರಿಂದ 6ರವರೆಗೆ ಬೆಂಗಳೂರು ಅಂತಾರಾಷ್ಟ್ರೀಯ ವಸ್ತು ಪ್ರದರ್ಶನ ಕೇಂದ್ರ, ಬೆಂಗಳೂರು ಇಲ್ಲಿ ಆಯೋಜಿಸಲು ರೂ.5.00 ಲಕ್ಷಗಳ (ರೂಪಾಯಿ ಐದು ಲಕ್ಷಗಳು ಮಾತ್ರ) ಸಹಾಯಾನುದಾನವನ್ನು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು, ಬೆಂಗಳೂರು. ಇವರಿಗೆ ಈ ಕೆಳಕಂಡ ನಿಬಂಧನೆ ಮತ್ತು ಷರತ್ತುಗಳಿಗೊಳಪಟ್ಟು ಮಂಜೂರು ಮಾಡಿದೆ.

1) ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದಲ್ಲಿನ ಲೆಕ್ಕಶೀರ್ಷಿಕೆ 3425–60–200–0–01 (101)(ಯೋ) ವೈಜ್ಞಾನಿಕ ಸಂಸ್ಥೆಗಳಿಗೆ ಸಹಾಯಾನುದಾನ ಇದರ ಅಡಿಯಲ್ಲಿ ಭರಿಸತಕ್ಕದ್ದು.

2) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು, ಬೆಂಗಳೂರು. ಇವರು ಸ್ವೀಕೃತ ರಸೀದಿಯಲ್ಲಿ ಹಣವನ್ನು ಸರ್ಕಾರದ ಅಧೀನ ಕಾರ್ಯದರ್ಶಿ ಹಾಗೂ ಪೀಠಾಧಿಕಾರಿಯವರ ಮೇಲು ರುಜುವಿನೊಂದಿಗೆ ಹಣ ಸೆಳೆಯಬಹುದು.

3) ಈ ಮೊತ್ತವನ್ನು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು, ಬೆಂಗಳೂರು. ಇವರು ಖಜಾನೆಯಿಂದ ಪಡೆದು ಮೇಲ್ಕಾಣಿಸಿದ ಕಾರ್ಯಕ್ರಮಕ್ಕಾಗಿ ಮೆ.ಎಂ.ಎಂ.ಆಕ್ಟೀವಾ, ಈ ಸಂಸ್ಥೆಗೆ ಪಾವತಿಸತಕ್ಕದ್ದು,

4) ಈ ಮೇಲಿನ ಅನುದಾನವನ್ನು ಖರ್ಚು ಮಾಡಿದ ಬಗ್ಗೆ ಸಂಸ್ಥೆಯು ಉಪಯೋಗತಾ ಪ್ರಮಾಣ ಪತ್ರ ಹಾಗೂ ಆಡಿಟ್ ಆದ ಲೆಕ್ಕಪತ್ರಗಳನ್ನು ಕಾರ್ಯಕ್ರಮ ಮುಗಿದ ತಕ್ಷಣ ಸಲ್ಲಿಸತಕ್ಕದ್ದು.

5) ಬಿಡುಗಡೆ ಮಾಡಿದ ಹಣವನ್ನು ಉದ್ದೇಶಿತ ಕಾರ್ಯಕ್ರಮಕ್ಕೆ ಮಾತ್ರ ಉಪಯೋಗಿಸತಕ್ಕದ್ದು, ಹಾಗೂ ಈ ಹಣವನ್ನು ಬೇರೆ ಯೋಜನೆಗೆ/ಕಾರ್ಯಕ್ರಮಗಳಿಗೆ ಸರ್ಕಾರದ ಅನುಮತಿ ಇಲ್ಲದೆ ವರ್ಗಾಯಿಸಬಾರದು.

6) ಉದ್ದೇಶಿತ ಕಾರ್ಯಕ್ರಮಕ್ಕೆ ಖರ್ಚಾಗದ ಬಾಬ್ತು ಉಳಿಸಿಕೊಂಡು ಅದನ್ನು ಸರ್ಕಾರದ ಗಮನಕ್ಕೆ ತರದೇ ಇದ್ದಲ್ಲಿ ಸರಳ ಬಡ್ಡಿಯೊಂದಿಗೆ ಸರ್ಕಾರಕ್ಕೆ ಪಾವತಿಸಿಕೊಳ್ಳಲು ಕ್ರಮ ಕೈಗೊಳ್ಳಲಾಗುವುದು.

7) ಉದ್ದೇಶಿತ ಕಾರ್ಯಕ್ರಮಕ್ಕೆ ಬಿಡುಗಡೆ ಮಾಡಲಾದಂತಹ ಅನುದಾನದ ಲೆಕ್ಕಪತ್ರಗಳನ್ನು ಮಂಜೂರು ಮಾಡುವ ಅಧಿಕಾರಿಯು ಸಮೀಕ್ಷೆಗಾಗಿ ಕೋರಿದ್ದಲ್ಲಿ ತಪ್ಪದೇ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ:16/05/2008ರ ಅಡಿಯಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಬೋರಲಿಂಗಯ್ಯ**

ಪಿ.ಆರ್. 1206

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಎಸ್.ಜಿ. ಅಮ್ಮಣಗಿ, ಹಿಂದಿನ ತಹಶೀಲ್ದಾರ್, ರಾಮದುರ್ಗ (ಪ್ರಸ್ತುತ ನಿವೃತ್ತ ತಹಶೀಲ್ದಾರ್, ಬೈಲಹೊಂಗಲ) ಇವರ ವಿರುದ್ಧದ ಇಲಾಖಾ ವಿಚಾರಣೆ – ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಪತ್ರ ಸಂಖ್ಯೆ: ಕಂಇ 92 ವಿಕೋವಿ 2006, ದಿನಾಂಕ: 10.8.2006.
2. ಬೆಳಗಾವಿ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ: ಕಂಶಾ/ಸಿಬ್ಬಂದಿ–1/ವಿವ/140/06–07, ದಿನಾಂಕ: 17.2.2007.
3. ಸರ್ಕಾರದ ಪತ್ರ ಸಂಖ್ಯೆ: ಕಂಇ 12 ಎಡಿಇ 2007, ದಿನಾಂಕ: 11.4.2007.
4. ಬೆಳಗಾವಿ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ: ಕಂಶಾ/ಸಿಬ್ಬಂದಿ–1/ವಿವ/140/06–07, ದಿನಾಂಕ: 14.5.2007.
5. ಸರ್ಕಾರದ ಪತ್ರ ಸಂಖ್ಯೆ: ಕಂಇ 12 ಎಡಿಇ 2007, ದಿನಾಂಕ: 2.6.2008.
6. ಬೆಳಗಾವಿ ಅಪರ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ: ಕಂಶಾ/ಸಿಬ್ಬಂದಿ–1/ವಿವ/140/06–07, ದಿನಾಂಕ: 28.5.2009.
7. ಸರ್ಕಾರದ ಪತ್ರ ಸಂಖ್ಯೆ: ಕಂಇ 12 ಎಡಿಇ 2007, ದಿನಾಂಕ: 1.1.2010.
8. ಬೆಳಗಾವಿ ವಿಭಾಗದ ಪ್ರಾದೇಶಿಕ ಆಯುಕ್ತರ ಪತ್ರ ಸಂಖ್ಯೆ: ಪ್ರಾಅಬೆ/ಸಿಬ್ಬಂದಿ–1/ವಿವ/119(ಎ)/2009–10, ದಿನಾಂಕ: 9.2.2011.

**ಪ್ರಸ್ತಾವನೆ:**

ಶ್ರೀ ಎಸ್.ಜಿ. ಅಮ್ಮಣಗಿ, ತಹಶೀಲ್ದಾರ್, ರಾಮದುರ್ಗ ಪ್ರಸ್ತುತ ನಿವೃತ್ತ ಇವರು ಅನಧಿಕೃತ ಹಾಗೂ ಬೇಕಾಯ್ದೆ ಶೀರ ಅವ್ಯವಹಾರಗಳ ಬಗ್ಗೆ ನಾಗರೀಕರು, ರಾಮದುರ್ಗರವರು ದಿನಾಂಕ: 25.6.2006ರಂದು ಸರ್ಕಾರಕ್ಕೆ ಸಲ್ಲಿಸಿರುವ ದೂರು ಅರ್ಜಿಯಲ್ಲಿನ ಎಲ್ಲ 24 ದೂರುಗಳ ಬಗ್ಗೆ ಶ್ರೀ ಎಸ್.ಜಿ. ಅಮ್ಮಣಗಿ, ತಹಶೀಲ್ದಾರ್ ರವರಿಂದ ವಿವರವಾದ ವರದಿ ಪಡೆದು ಈ ಬಗ್ಗೆ ಪ್ರತಿ ದೂರಿನ ಬಗ್ಗೆ ಜಿಲ್ಲಾಧಿಕಾರಿಗಳ ಷರಾದೊಂದಿಗೆ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಕೋರಿ ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಸರ್ಕಾರದ ದಿನಾಂಕ: 10.8.2006ರ ಪತ್ರದಲ್ಲಿ ಬೆಳಗಾವಿ ಜಿಲ್ಲಾಧಿಕಾರಿಗಳನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ದಿನಾಂಕ: 17.2.2007ರ ಪತ್ರದಲ್ಲಿ, ಜಿಲ್ಲಾಧಿಕಾರಿಗಳು ಶ್ರೀ ಎಸ್.ಜಿ. ಅಮ್ಮಣಗಿ, ತಹಶೀಲ್ದಾರ್, ರಾಮದುರ್ಗ ಪ್ರಸ್ತುತ ಇವರ ವಿರುದ್ಧದ ದೂರಿನ ಕುರಿತು ಉಪ ವಿಭಾಗಾಧಿಕಾರಿಗಳು, ಬೈಲಹೊಂಗಲ ಇವರು 24 ದೂರುಗಳ ಬಗ್ಗೆ ವಿವರವಾದ ವರದಿಯನ್ನು ಪಡೆದು ಅವರ ಷರಾದೊಂದಿಗೆ ವರದಿ ಸಲ್ಲಿಸಿದ್ದು, ಅವರು ಸಲ್ಲಿಸಿದ ಷರಾಗಳು ಸಮಂಜಸವಾಗಿದೆ ಎಂದು ಅಭಿಪ್ರಾಯ ಪಟ್ಟು ಈ ಪ್ರಕರಣವನ್ನು ಕೈಬಿಡಬಹುದಾಗಿದೆ ಎಂದು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಈ ಮಧ್ಯ, ಶ್ರೀ ಎಸ್.ಜಿ. ಅಮ್ಮಣಗಿ, ತಹಶೀಲ್ದಾರ್, ರಾಮದುರ್ಗ ಪ್ರಸ್ತುತ ನಿವೃತ್ತ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಸರ್ಕಾರವು ನಿರ್ಧರಿಸಿದ್ದರಿಂದ, ಸದರಿಯವರಿಗೆ ವಿಶ್ರಾಂತಿ ವೇತನ ಸೌಲಭ್ಯಗಳನ್ನು ಮುಂದಿನ ಆದೇಶದವರೆಗೆ ತಡೆಹಿಡಿಯುವಂತೆ ಕೋರಿ ಸರ್ಕಾರದಿಂದ ದಿನಾಂಕ: 3.4.2007ರಂದು ಮಹಾಲೇಖಪಾಲರ ಕಛೇರಿಗೆ ಪತ್ರ ಬರೆಯಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ಸರ್ಕಾರದ ದಿನಾಂಕ: 11.4.2007ರ ಪತ್ರದಲ್ಲಿ, ಶ್ರೀ ಎಸ್.ಜಿ. ಅಮ್ಮಣಗಿ, ನಿವೃತ್ತ ತಹಶೀಲ್ದಾರ್‌ರವರು ರಾಮದುರ್ಗ ತಹಶೀಲ್ದಾರರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯ ಲೋಪದ ಆಪಾದನೆಗೆ ಅವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲು ಸರ್ಕಾರವು ನಿರ್ಧರಿಸಿದ್ದು, ಕರಡು ದೋಷಾರೋಪಣಾ ಪಟ್ಟಿಯನ್ನು ಅನುಬಂಧ–1 ರಿಂದ 4 ಹಾಗೂ ಅನುಬಂಧ–3ರಲ್ಲಿರುವ ದಾಖಲಾತಿಯೊಂದಿಗೆ ಸೂಕ್ತ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಕಳುಹಿಸುವಂತೆ ಕೋರಿ ಬೆಳಗಾವಿ ಜಿಲ್ಲಾಧಿಕಾರಿಗಳಿಗೆ ಪತ್ರ ಬರೆಯಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (4)ರ ದಿನಾಂಕ: 14.5.2007ರ ಪತ್ರದಲ್ಲಿ ಬೆಳಗಾವಿ ಜಿಲ್ಲಾಧಿಕಾರಿಗಳು ಶ್ರೀ ಎಸ್.ಜಿ. ಅಮ್ಮಣಗಿ, ನಿವೃತ್ತ ತಹಶೀಲ್ದಾರ್ ಇವರ ವಿರುದ್ಧ ಶಿಸ್ತು ಕ್ರಮ ಬಗ್ಗೆ ನಿಯಮ 11(3)ರಡಿ ಅನುಬಂಧ-1 ರಿಂದ 4ರವರೆಗೆ ಕರಡು ಮತ್ತು ಅನುಬಂಧ-3ರ ಪೂರಕ ದಾಖಲೆಗಳನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (5)ರ ಸರ್ಕಾರದ ದಿನಾಂಕ: 2.6.2008ರ ಪತ್ರದಲ್ಲಿ, ಶ್ರೀ ಎಸ್.ಜಿ. ಅಮ್ಮಣಗಿ, ನಿವೃತ್ತ ಹಿಂದಿನ ತಹಶೀಲ್ದಾರ್, ರಾಮದುರ್ಗ ಇವರು ದಿನಾಂಕ: 8.11.2001ರಿಂದ 12.4.2000ರ ಅವಧಿಯಲ್ಲಿ ಒಂಟಜಥಿ ಒಚಿಟಿಚಿಂಜಟಜಟಣ ಸುತ್ತೋಲೆ ಪ್ರಕಾರ ಕಂಪ್ಯೂಟರ್ ಕಿಯೋಸ್ಕ್‌ಗಳಲ್ಲಿ ನೇರವಾಗಿ ಉಸ್ತುವಾರಿ ತಹಶೀಲ್ದಾರ್ ಜವಾಬ್ದಾರಿಯಾಗಿ ಸದರಿ ಮೊತ್ತ ರೂ. 1,50,000/-ಗಳ ಶಾರ್ಟ್ ಕ್ರೆಡಿಟ್ ತುಂಬಿರುವರೇ ಅಥವಾ ಇಲ್ಲವೇ ಎಂಬ ಬಗ್ಗೆ ಕೂಡಲೇ ಸರ್ಕಾರಕ್ಕೆ ಮಾಹಿತಿಯನ್ನು ಒದಗಿಸುವಂತೆ ಬೆಳಗಾವಿ ಜಿಲ್ಲಾಧಿಕಾರಿಗಳನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (6)ರ ಬೆಳಗಾವಿ ಅಪರ ಜಿಲ್ಲಾಧಿಕಾರಿಗಳ ದಿನಾಂಕ: 28.5.2009ರ ಪತ್ರದಲ್ಲಿ, ಬೈಲಹೊಂಗಲ ಉಪ ವಿಭಾಗಾಧಿಕಾರಿಗಳ ವರದಿಯಂತೆ, ಶ್ರೀ ಎಸ್.ಜಿ. ಅಮ್ಮಣಗಿ ಇವರ ಅವಧಿಯಲ್ಲಿ ಕಂಪ್ಯೂಟರ್ ಕಿಯಾಸ್ಕಿನಲ್ಲಿ ಶಾರ್ಟ್ ಕ್ರೆಡಿಟ್ ಎಂದು ನಮೂದಿಸಿದ ಮೊತ್ತ ರೂ. 1,50,000/-ಗಳನ್ನು ಸರ್ಕಾರಕ್ಕೆ ತುಂಬಿರುವುದಿಲ್ಲ. ಈ ಕುರಿತು ಕಿಯಾಸ್ಕ್ ಆಪರೇಟರ್ ಇವರಿಂದ ಲಿಖಿತ ಹೇಳಿಕೆ ಪಡೆದಿದ್ದು, ಅವರು ಶಾರ್ಟ್ ಕ್ರೆಡಿಟ್ ಮೊತ್ತವು ಗಣಕಯಂತ್ರದಲ್ಲಿ ಮುದ್ರಣ ದೋಷ ಮತ್ತು ಪೇಪರ್ ಜಾಮ್, ರಿಬ್ಬನ್ ಮೂವ್‌ಮೆಂಟ್ ಫೇಲ್ಯೂರ್‌ದಿಂದ ಆಗಿದ್ದು, ಈ ಬಗ್ಗೆ ಪಹಣಿಗಳನ್ನು ತೆಗೆದು ಇಟ್ಟಿರುತ್ತಾರೆ. ಇಂತಹ ಪಹಣಿಗಳ ಕುರಿತು ಜಿಲ್ಲಾಧಿಕಾರಿಯವರ ಪತ್ರ ಸಂಖ್ಯೆ: ಕಂಶಾ/ಆರ್‌ಟಿಸಿ/ಸಿಆರ್/157/05-06, ದಿನಾಂಕ: 19.11.2005ರಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದು, ಸರ್ಕಾರದ ಆದೇಶವು ಬರಬೇಕಾಗಿದ್ದು, ಈ ಹಿನ್ನೆಲೆಯಲ್ಲಿ ಸಂಬಂಧಿಸಿದ ನೌಕರರಿಗೆ ಶಾರ್ಟ್ ಕ್ರೆಡಿಟ್ ಆದ ಮೊತ್ತ ರೂ. 1,50,000/-ಗಳನ್ನು ವಸೂಲು ಮಾಡಿರುವುದಿಲ್ಲ ಎಂದು ವರದಿ ನೀಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (7)ರ ಸರ್ಕಾರದ ದಿನಾಂಕ: 1.1.2010ರ ಪತ್ರದಲ್ಲಿ ಶ್ರೀ ಎಸ್.ಜಿ. ಅಮ್ಮಣಗಿ, ನಿವೃತ್ತ ಹಿಂದಿನ ತಹಶೀಲ್ದಾರ್, ರಾಮದುರ್ಗ ಇವರು ದಿನಾಂಕ: 8.11.2001 ರಿಂದ 12.4.2004ರ ಅವಧಿಯಲ್ಲಿ ರಾಮದುರ್ಗ ತಾಲ್ಲೂಕಿನ ತಹಶೀಲ್ದಾರರಾಗಿದ್ದಾಗ ಒಟ್ಟು ರೂ. 4,94,750/- ಮುದ್ರಾಂಕ ಶುಲ್ಕ ವಸೂಲಿ ಮಾಡದೇ ಹಾಗೂ ಅಧೀನ ನೌಕರರಿಗೆ ಸಕಾಲಕ್ಕೆ ಮೇಲಿಂದ ಮೇಲೆ ಸೂಕ್ತ ನಿರ್ದೇಶನಗಳನ್ನು ನೀಡದೇ ಕರ್ತವ್ಯ ನಿರ್ಲಕ್ಷತೆ ತೋರಿರುವುದು, ಎರಡನೆಯದಾಗಿ ದಿನಾಂಕ: 8.11.2011 ರಿಂದ 12.4.2004ರವರೆಗೆ ರಾಮದುರ್ಗ ತಾಲ್ಲೂಕಿನ ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಮನಿ ಮ್ಯಾನೇಜ್‌ಮೆಂಟ್ ಪ್ರಕಾರ ಕಂಪ್ಯೂಟರ್ ಕಿಯೋಸ್ಕ್‌ಗಳಲ್ಲಿ ನೇರ ಉಸ್ತುವಾರಿ ತಹಶೀಲ್ದಾರ್ ಜವಾಬ್ದಾರಿಯಾಗಿದ್ದರೂ ತಮ್ಮ ಅವಧಿಯಲ್ಲಿ ಸುಮಾರು ರೂ. 1,50,000/-ಗಳ ಶಾರ್ಟ್ ಕ್ರೆಡಿಟ್ ಇದ್ದು, ಅವರ ಗಮನಕ್ಕೆ ತಂದಿದ್ದರೂ ಸದರಿ ರಕಂ ಸರ್ಕಾರಕ್ಕೆ ತುಂಬಿಸಿಲ್ಲವೆಂದು ಸದರಿ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಪ್ರಸ್ತಾಪಿಸಲಾಗಿದ್ದು, ಶ್ರೀ ಎಸ್.ಜಿ. ಅಮ್ಮಣಗಿ ಇವರ ಶಾರ್ಟ್ ಕ್ರೆಡಿಟ್ ಆದ ರೂ. 1,50,000/-ಗಳನ್ನು ಸರ್ಕಾರಕ್ಕೆ ತುಂಬಿರುವುದಿಲ್ಲವೆಂದು ಈ ಕುರಿತು ಆಪರೇಟರ್ ಹೇಳಿಕೆ ಪಡೆದಿದ್ದು, ಅವರು ಶಾರ್ಟ್ ಕ್ರೆಡಿಟ್ ಆದ ಮೊತ್ತವು ಗಣಕಯಂತ್ರದಲ್ಲಿ ಮುದ್ರಣ ದೋಷ ಮತ್ತು ಪೇಪರ್ ಜಾಮ್, ರಿಬ್ಬನ್ ಮೂವ್‌ಮೆಂಟ್ ದೋಷದಿಂದ ಆಗಿದೆ ಎಂದು ಅವುಗಳ ಪಹಣಿಗಳನ್ನು ತೆಗೆದು ಇಡಲಾಗಿದೆ ಎಂದು ವರದಿ ಮಾಡಿದ್ದು, ಈ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ, ಸ್ಪಷ್ಟ ಅಭಿಪ್ರಾಯದೊಂದಿಗೆ ಕೂಡಲೇ ವರದಿ ಕಳುಹಿಸಿಕೊಡುವಂತೆ ಕೋರಿ ಆಯುಕ್ತರು, ಭೂಮಾಪನ ಮತ್ತು ಭೂ ದಾಖಲೆಗಳ ಇಲಾಖೆ, ಕೆ.ಆರ್. ಸರ್ಕಲ್, ಬೆಂಗಳೂರು ರವರನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (8)ರ ಬೆಳಗಾವಿ ವಿಭಾಗದ ಪ್ರಾದೇಶಿಕ ಆಯುಕ್ತರ ದಿನಾಂಕ: 9.2.2011ರ ಪತ್ರದಲ್ಲಿ, ಆಯುಕ್ತರು ಭೂ ಮಾಪನ ಮತ್ತು ಭೂ ದಾಖಲೆಗಳ ಇಲಾಖೆರವರು ತಮ್ಮ ದಿನಾಂಕ: 30.1.2011ರ ಪತ್ರದೊಂದಿಗೆ ಬೆಳಗಾವಿ ಪ್ರಾದೇಶಿಕ ಆಯುಕ್ತರ ಕಛೇರಿಗೆ ಸಂಬಂಧಿಸಿದ ಕಡತ ಕಳುಹಿಸಿ ವರದಿಯನ್ನು ನೇರವಾಗಿ ಸರ್ಕಾರಕ್ಕೆ ಸಲ್ಲಿಸುವಂತೆ ಕೋರಿರುತ್ತಾರೆ. ಈ ವಿಷಯವನ್ನು ಬೆಳಗಾವಿ ಜಿಲ್ಲಾಧಿಕಾರಿಗಳು ಪರಿಶೀಲಿಸಿ, ವಿಚಾರಣೆ ಜರುಗಿಸಿ ಸಲ್ಲಿಸಿದ ವರದಿಯನ್ವಯ ಪ್ರಾದೇಶಿಕ ಆಯುಕ್ತರು ಸರ್ಕಾರಕ್ಕೆ ಮೇಲಿನ ಸ್ವೀಕೃತಿಯಲ್ಲಿ ವರದಿಯನ್ನು ಕಳುಹಿಸಿರುತ್ತಾರೆ.

ಶ್ರೀ ಎಸ್.ಜಿ. ಅಮ್ಮಣಗಿ, ಹಿಂದಿನ ತಹಶೀಲ್ದಾರ್, ರಾಮದುರ್ಗ (ಪ್ರಸ್ತುತ ನಿವೃತ್ತ) ಇವರು ರಾಮದುರ್ಗ ತಹಶೀಲ್ದಾರ್ ಎಂದು ಸೇವೆ ಸಲ್ಲಿಸುತ್ತಿದ್ದ ಅವಧಿಯಲ್ಲಿ ಕಂಪ್ಯೂಟರ್ ಕಿಯಾಸ್ಕ್‌ದಲ್ಲಿ ಶಾರ್ಟ್ ಕ್ರೆಡಿಟ್ ಎಂದು ನಮೂದಿಸಿರುವ ಮೊತ್ತದ ಹಣ ರೂ. 1,50,000/-ಗಳನ್ನು ವಸೂಲು ಮಾಡದೇ ಮತ್ತು ಸರ್ಕಾರಕ್ಕೆ ತುಂಬದೇ ಇರುವ ಬಗ್ಗೆ ಈ ಕೆಳಗಿನಂತೆ ವಿವರಗಳನ್ನು ನೀಡಿರುತ್ತಾರೆ.

- ಕಂಪ್ಯೂಟರ್ ಕಿಯಾಸ್ಕ್‌ದಲ್ಲಿ ಶಾರ್ಟ್ ಕ್ರೆಡಿಟ್ ಎಂದು ನಮೂದಿಸಿರುವ ರೂ. 1,50,000/- ಹಣದಲ್ಲಿ ಅತಿವೃಷ್ಟಿಯ ಪರಿಹಾರ ಹಣ ರೂ. 47,450/-ಗಳು ಕೂಡಿರುತ್ತದೆ. ಸದರಿ ಪರಹಾರ ಧನದ ಚೆಕ್‌ಗಳನ್ನು ವಾರಸುದಾರರು ಸಿಗಲಾರದ ಮೂಲಕ ಅದನ್ನು ಪುನಃ ಕ್ಯಾಶ್ ಬುಕ್ಕಿನಲ್ಲಿ ಜಮೆ ಎಂದು ತೆಗೆದುಕೊಂಡಿರುವ ಕಾರಣ ಕಂಪ್ಯೂಟರ್ ಕಿಯಾಸ್ಕ್ ಪ್ರಕಾರ ಭರಣಾ ಮಾಡಬೇಕಾದ ಮೊತ್ತ ರೂ. 1,03,920/-ಗಳು ಆಗುತ್ತದೆ.
- 2002ನೇ ಇಸವಿಯಲ್ಲಿ ಪಹಣಿ ಪತ್ರಿಕೆಗಳನ್ನು ಕಂಪ್ಯೂಟರ್ ಕಿಯಾಸ್ಕ್ ಮೂಲಕ ಗಣಕೀಕೃತಗೊಳಿಸಿ ರೈತರಿಗೆ ವಿತರಿಸುವ ಕುರಿತು ಪೈಲೆಟ್ ಪ್ರಾಜೆಕ್ಟ್ ಎಂದು ಮೊದಲ ಬಾರಿಗೆ ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲ್ಲೂಕಿನಲ್ಲಿ ತೆಗೆದುಕೊಂಡಿದ್ದು, ಸದರಿ ಕೆಲಸಕ್ಕೆ ನುರಿತ ಸಿಬ್ಬಂದಿಗಳನ್ನು ನೇಮಕಾತಿ ಮಾಡಿಕೊಳ್ಳದೇ ಹೊಸದಾಗಿ ಗ್ರಾಮಲೆಕ್ಕಿಗರನ್ನು ನೇಮಕಾತಿ ಮಾಡಿಕೊಂಡಂತಹ ಸಿಬ್ಬಂದಿಯವರಿಗೆ ಗಣಕೀಕೃತ ಪಹಣಿ ಪತ್ರಿಕೆಗಳನ್ನು ಕಂಪ್ಯೂಟರ್ ಕಿಯಾಸ್ಕ್ ಮೂಲಕ ವಿತರಿಸುವ ಕಾರ್ಯ ನಿರ್ವಹಿಸುವ ಕುರಿತು ಆದೇಶಿಸಲಾಗಿತ್ತು. ಅದೇ ಸಮಯದಲ್ಲಿ ರಾಮದುರ್ಗ ತಾಲ್ಲೂಕಿನಲ್ಲಿ ಸತತ ಎರಡು ವರ್ಷ ಬರಗಾಲ ಬಿದ್ದು, ರೈತರು ಬೆಳೆ ವಿಮೆ ಮಾಡಿಸುವುದಕ್ಕೋಸ್ಕರ ಉತಾರ ಪಡೆಯಲು ರಾತ್ರಿ ಹಗಲೆನ್ನದೇ ರೈತರಿಗೆ ಪತಾರ ಪೂರೈಸಿದ್ದು, ಇದರಿಂದ ಸಿಬ್ಬಂದಿಯವರು ಸಂಪೂರ್ಣ ಒತ್ತಡದಲ್ಲಿಯೇ ಕೆಲಸ ನಿರ್ವಹಿಸುತ್ತಿದ್ದರು.
- ಅಲ್ಲದೇ ಹೊಸದಾಗಿ ಗಣಕಯಂತ್ರಗಳನ್ನು ಉಪಯೋಗಿಸುತ್ತಿದ್ದರಿಂದ, ಪಹಣಿ ಪತ್ರಿಕೆಗಳನ್ನು ಡಾಟಾ ಮ್ಯೆಟ್ರಿಕ್ಸ್ ಪ್ರಿಂಟರ್ ಮೂಲಕ ವಿತರಿಸಲಾಗುತ್ತಿದ್ದು, ಇದರಿಂದ ಪಹಣಿ ಪತ್ರಿಕೆಗಳು ಸರಿಯಾಗಿ ಬರುತ್ತಿರಲಿಲ್ಲ. ಪ್ರಿಂಟ್ ತೆಗೆಯುವ ಕಾಲಕ್ಕೆ ಪೇಪರ್ ಮಧ್ಯದಲ್ಲಿ ನಿಂತು ಹೋಗುತ್ತಿದ್ದು, ಪ್ರಿಂಟ್ ಪ್ರಕ್ರಿಯೆಯಿಂದ ತಾನೆ ನಿಂತು ಹೋಗಿ ಪಹಣಿ ಪತ್ರಿಕೆ ಹಾಳಾಗುತ್ತಿದ್ದು, ಪ್ರಿಂಟ್ ಸರಿಯಾಗಿ ಆಗದೇ ಪಹಣಿ ಪತ್ರಿಕೆಗಳು ಹೊರಗು ಬರುತ್ತಿದ್ದು, ಬೆಳೆ ವಿವರಗಳು ಸರಿಯಾಗಿ ಬರುತ್ತಿರಲಿಲ್ಲ. ಪ್ರಿಂಟರ್ ಕೆಲವು ಸಲ ಜಂಪ್ ಆಗುತ್ತಿದ್ದು, ಇಂತಹ ಪ್ರಕರಣಗಳಲ್ಲಿ ಹಣ ಮಾತ್ರ ಕಿಯಾಸ್ಕ್‌ನಲ್ಲಿ ರೂ. 15/- ಎಂದು ಜಮಾ ಆಗುತ್ತಿದ್ದು, ಇದರಿಂದ ಕಿಯಾಸ್ಕ್ ಸಿಬ್ಬಂದಿ ಪ್ರಾರಂಭದಲ್ಲಿ ಬಹಳಷ್ಟು ಸಮಸ್ಯೆಗಳನ್ನು ಎದುರಿಸುತ್ತಿದ್ದು, ದೋಷಪೂರಿತ ಪಹಣಿ ಪತ್ರಿಕೆ ಬಂದರೂ ಕೂಡ ಅದಕ್ಕೆ

ಸಂಬಂಧಿಸಿದವರಿಂದ ಯಾವುದೇ ಹಣ ವಸೂಲಿ ಮಾಡದೇ ಇದ್ದರೂ ಕೂಡ ಕಿಯಾಸ್ಕ್‌ನಲ್ಲಿ ಹಣ ಜಮಾ ಆಗುತ್ತಾ ಹೋಗುತ್ತಿದ್ದು, ಇದರಿಂದ ಪ್ರತ್ಯಕ್ಷ ಹಣಕ್ಕೂ ಕಿಯಾಸ್ಕ್‌ನಲ್ಲಿ ತೋರಿಸಿದ ಹಣಕ್ಕೂ ವ್ಯತ್ಯಾಸ ಕಂಡು ಬರುತ್ತಿದ್ದು, ಈ ವ್ಯತ್ಯಾಸದ ಹಣ ದೋಷಪೂರಿತ ನಿರುಪಯುಕ್ತ ಪಹಣಿ ಪತ್ರಿಕೆಗಳಿಗೆ ಸಂಬಂಧಿಸಿದ ಹಣವಿದ್ದುದರಿಂದ ಹಣವನ್ನು ಯಾರಿಂದಲೂ ವಸೂಲು ಮಾಡದೇ ಇರುವುದರಿಂದ ಅದನ್ನು ಸರ್ಕಾರಕ್ಕೆ ಜಮಾ ಮಾಡಿರುವುದಿಲ್ಲ.

- ಈ ಅಂಶವನ್ನು ದೃಢಪಡಿಸಿಕೊಳ್ಳಲು ಈ ರೀತಿಯ ವ್ಯತ್ಯಾಸ ಪ್ರತಿಯೊಂದು ತಾಲ್ಲೂಕಿನಲ್ಲಿ ಇರುವುದು ಕಂಡುಬಂದಿರುವ ಕಾರಣದಿಂದಾಗಿ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ತಹಶೀಲ್ದಾರ್ (ಐ.ಡಿ.) ಇವರನ್ನು ಬೆಳಗಾವಿ ಜಿಲ್ಲೆಯ ಹತ್ತು ತಾಲ್ಲೂಕಿನ ಕಿಯಾಸ್ಕ್ ಮನಿ ಮ್ಯಾನೇಜ್‌ಮೆಂಟ್ ಆಡಿಟ್ ಮಾಡಿ ವರದಿ ಸಲ್ಲಿಸಲು ಸೂಚಿಸಿದ್ದನ್ವಯ, ಕೇವಲ ರಾಮದುರ್ಗ ತಾಲ್ಲೂಕಿನಲ್ಲಷ್ಟೇ ಅಲ್ಲದೇ ಇತರೆ ಎಲ್ಲಾ ತಾಲ್ಲೂಕಿನಲ್ಲಿಯೂ ವ್ಯತ್ಯಾಸ ಸಾಮಾನ್ಯವಾಗಿ ಇರುವುದು ಎಂದು ವರದಿ ಸಲ್ಲಿಸಿರುತ್ತಾರೆ. ಸರ್ಕಾರದ ವಿಶೇಷ ಕಾರ್ಯದರ್ಶಿಗಳು, ಕಂದಾಯ ಇಲಾಖೆ (ಭೂಮಿ) ಇವರಿಗೂ ಸಹ ಮೇಲಿನ ವಿವರವಾದ ವರದಿಯನ್ನು ಸಲ್ಲಿಸಿರುತ್ತಾರೆ.
- 2005–06ನೇ ಸಾಲಿನಲ್ಲಿ ಕಿಯಾಸ್ಕ್‌ದಲ್ಲಿ ತೋರಿಸುತ್ತಿದ್ದ ಒಟ್ಟು ಹಣವನ್ನು ಕಡಿಮೆ ಮಾಡಿ ಹೊಸದಾಗಿ ಅಭಿವೃದ್ಧಿ ಪಡಿಸಿದ ಭೂಮಿ ತಂತ್ರಾಂಶ 4.5ನ್ನು ಅಳವಡಿಸಲಾಗಿದ್ದು, ಈ ತಂತ್ರಾಂಶದಲ್ಲಿ ಪಹಣಿ ಪತ್ರಿಕೆ ವಿತರಣೆಯಾದ ಹಣದ ಬಗ್ಗೆ ಕಿಯಾಸ್ಕ್‌ನಲ್ಲಿಯೇ ಚಲನ್ ಬರುವುದರಿಂದ, ಮತ್ತು ದೋಷಪೂರಿತ ಪಹಣಿ ಪತ್ರಿಕೆಗಳ ಹಣ ಕಿಯಾಸ್ಕ್‌ನಲ್ಲಿಯೇ ಕಟಾವು ಆಗಿ ಬರುವುದರಿಂದ, ಯಾವ ಸಮಸ್ಯೆ ಇರುವುದಿಲ್ಲ. ಅದೆ 2002 ರಿಂದ 2005ರವರೆಗೆ ಪಹಣಿ ಪತ್ರಿಕೆ ಗಣಕೀಕೃತ ವ್ಯವಸ್ಥೆ ಟ್ರಾಯಲ್ ಮತ್ತು ಎರರ್ ತಳಹದಿಯ ಮೇಲೆ ನಡೆದಿದ್ದು, ಇಂತಹ ಒಂದು ಬೃಹತ್ ಯೋಜನೆಯನ್ನು ಅನುಷ್ಠಾನಗೊಳಿಸುವಾಗ ಪ್ರಾರಂಭದಲ್ಲಿ ಬಹಳಷ್ಟು ಸಮಸ್ಯೆಗಳು ಉದ್ಭವಿಸಿ ಮತ್ತು ತಪ್ಪು ತಡೆಗಳು ಆಗಿರಬಹುದಾದ ಸಾಧ್ಯತೆ ಇರಬಹುದಾಗಿದೆ ಎಂದು ತಿಳಿದು ಬರುತ್ತದೆ.
- ರಾಮದುರ್ಗ ತಾಲ್ಲೂಕಿನಲ್ಲಿ ತಹಶೀಲ್ದಾರ್ ಕಛೇರಿಯಲ್ಲಿ ಲಭ್ಯವಿದ್ದ 1908 ದೋಷಪೂರಿತ ಪತ್ರಿಕೆಗಳನ್ನು ಪರಿಶೀಲಿಸಲಾಗಿ, ಸದರಿ ಮೇಲ್ಕಾಣಿಸಿದ ವ್ಯತ್ಯಾಸದ ಹಣ ಇಂತಹ ದೋಷಪೂರಿತ ಪಹಣಿ ಪತ್ರಿಕೆಗಳಿಗೆ ಸಂಬಂಧಿಸಿದ್ದು, ಈ ಕೆಳಗೆ ತೋರಿಸಿದ ಕಾರಣಗಳಿಗಾಗಿ ಕೆಲವು ದೋಷಪೂರಿತ ಪಹಣಿ ಪತ್ರಿಕೆಗಳ ದಾಖಲೆಗಳು ಸಿಗುವುದಿಲ್ಲವೆಂದು ಕಂಡುಬರುತ್ತದೆ.
  1. ಪಹಣಿ ಪತ್ರಿಕೆ ಕಿಯಾಸ್ಕ್‌ದಲ್ಲಿ ಪ್ರಿಂಟ್‌ಗೆ ಹಾಕಿದಾಗ ಜಂಪ್ ಆದ ಸಂದರ್ಭದಲ್ಲಿ
  2. ಪ್ರಿಂಟರ್‌ನಲ್ಲಿಯೇ ಜಾಮ್ ಆದಾಗ ಅದನ್ನು ಹರಿದೇ ತೆಗೆಯಬೇಕಾದ ಸಂದರ್ಭದಲ್ಲಿ
  3. ಪ್ರಿಂಟ್ ಕೋರಿಕೆ ರದ್ದುಪಡಿಸಿದ ಸಂದರ್ಭದಲ್ಲಿ
  4. ತಾಂತ್ರಿಕ ದೋಷದಿಂದ ಆಪರೇಟಿಂಗ್ ರಿಕ್ವೆಸ್ಟ್ ತನ್ನಷ್ಟಕ್ಕೆ ತಾನೇ ರದ್ದಾದ ಸಂದರ್ಭದಲ್ಲಿ
- ಇಂತಹ ಸಂದರ್ಭದಲ್ಲಿ ಒಟ್ಟು ವ್ಯತ್ಯಾಸದ ಹಣಕ್ಕೂ ಲಭ್ಯವಿದ್ದ ದೋಷಪೂರಿತ ಪಹಣಿ ಪತ್ರಿಕೆಗಳಿಗೂ ಹೊಂದಾಣಿಕೆ ಮಾಡುವುದು ಸಾಧ್ಯವಾಗುವುದಿಲ್ಲ. ಈ ಎಲ್ಲಾ ಸಂದರ್ಭಗಳನ್ನು ಪರಿಶೀಲಿಸಲಾಗಿ, ಸದರಿ ಮೇಲ್ಕಾಣಿಸಿದ ವ್ಯತ್ಯಾಸದ ಹಣ ದೋಷಪೂರಿತ ಪಹಣಿ ಪತ್ರಿಕೆಗಳಿಗೆ ಸಂಬಂಧಿಸಿದ್ದು ಕಂಡುಬರುತ್ತದೆ. ಈ ವ್ಯತ್ಯಾಸದ ಹಣ ತಾಂತ್ರಿಕ ದೋಷದಿಂದಾಗಿದ್ದರಿಂದ ಸರ್ಕಾರಕ್ಕೆ ತುಂಬುವ ಅವಶ್ಯಕತೆ ಇರುವುದಿಲ್ಲವೆಂದು ಅಭಿಪ್ರಾಯ ಪಡಲಾಗಿದೆ.
- ಎರಡನೆಯದಾಗಿ ಮುದ್ರಾಂಕ ಹಣ ವಸೂಲಿ ಮಾಡುವ ಕುರಿತು ಆಗಿನ ತಹಶೀಲ್ದಾರರು ಮುತುವರ್ಜಿ ವಹಿಸಿಲ್ಲ ಅನ್ನುವ ಅಂಶದ ಕುರಿತು ವಿಚಾರಿಸಲಾಗಿ, ತಹಶೀಲ್ದಾರ್ ಕಛೇರಿಯಿಂದ ಹಕ್ಕು ದಾಖಲೆ ಮಾಡುವ ಕುರಿತು ವರದಿಗಳನ್ನು ಕಳುಹಿಸುವಾಗಲೇ ಹಕ್ಕು ದಾಖಲೆಗಳನ್ನು ಅನುಷ್ಠಾನಗೊಳಿಸುವ ಪೂರ್ವದಲ್ಲಿ ಎಲ್ಲಾ ಕಾನೂನುಗಳನ್ನು ಪಾಲಿಸಿ, ಹಕ್ಕು ದಾಖಲೆಗಳನ್ನು ಮಾಡಬೇಕೆಂದು ನಿರ್ದೇಶನ ನೀಡಿದ್ದು ಮತ್ತು ಸರ್ಕಾರಕ್ಕೆ ಬರತಕ್ಕ ಹಣ ವಸೂಲು ಮಾಡಲು ತಿಳಿಸಿದ ಬಗ್ಗೆ ಕಂಡು ಬರುತ್ತದೆ. ಪ್ರತಿ ತಿಂಗಳ ಗ್ರಾಮಲೆಕ್ಕಿಗರ ಸಭೆಯಲ್ಲಿ ನಿಯಮಿತವಾಗಿ ಸರ್ಕಾರಿ ಬಾಕಿ ಹಣ ವಸೂಲಿ ಮಾಡಿದ ಬಗ್ಗೆ ಪರಾಮರ್ಶೆ ಮಾಡಿದ್ದು ಕಂಡು ಬರುತ್ತದೆ.

ಈ ಎಲ್ಲಾ ಕಾರಣಗಳಿಗಾಗಿ ದೋಷಪೂರಿತ ಪಹಣಿ ಪತ್ರಿಕೆಗಳಿಗೆ ಸಂಬಂಧಿಸಿದಂತೆ, ರೂ. 1,03,920/–ಗಳನ್ನು ಸರ್ಕಾರಕ್ಕೆ ತುಂಬುವುದು ಅವಶ್ಯವಿರುವುದಿಲ್ಲ ಎಂದು ಜಿಲ್ಲಾಧಿಕಾರಿಗಳು, ಬೆಳಗಾವಿರವರು ವರದಿಯಿಂದ ಕಂಡುಬಂದಿದ್ದು, ಅದರಿಂದ, ಹಿಂದಿನ ರಾಮದುರ್ಗ ತಹಶೀಲ್ದಾರ್‌ರವರು ಕರ್ತವ್ಯಚ್ಯುತಿ ಮಾಡಿರುವುದಿಲ್ಲ ಎಂದು ಕಂಡು ಬಂದಿರುವುದರಿಂದ, ಹಾಗೂ ದೋಷಪೂರಿತ ಗೇಣಿ ಪಹಣಿ ಪತ್ರಿಕೆಗಳ ಬಗ್ಗೆ ಯಾರಿಂದಲೂ ಹಣ ವಸೂಲಿ ಮಾಡಲು ಬಾರದ್ದರಿಂದ, ಈ ಪ್ರಕರಣವನ್ನು ಜಿಲ್ಲಾಧಿಕಾರಿಗಳು, ಬೆಳಗಾವಿರವರ ವರದಿ ಆಧಾರದ ಮೇಲೆ ಮುಕ್ತಾಯಗೊಳಿಸಲು ಪ್ರಾದೇಶಿಕ ಆಯುಕ್ತರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಜಿಲ್ಲಾಧಿಕಾರಿಗಳು, ಬೆಳಗಾವಿರವರ ವರದಿಯ ಆಧಾರದ ಮೇಲೆ ಮುಕ್ತಾಯಗೊಳಿಸಲು ಪ್ರಾದೇಶಿಕ ಆಯುಕ್ತರು, ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವುದರಿಂದ, ಶ್ರೀ ಎಸ್.ಜಿ. ಅಮ್ಮಣಗಿ, ಹಿಂದಿನ ತಹಶೀಲ್ದಾರ್, ರಾಮದುರ್ಗ (ಪ್ರಸ್ತುತ ನಿವೃತ್ತ) ಇವರ ವಿರುದ್ಧದ ಶಿಸ್ತು ಪ್ರಕರಣವನ್ನು ಸರ್ಕಾರದ ಹಂತದಲ್ಲಿ ಮುಕ್ತಾಯಗೊಳಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 12 ಎಡಿಇ 2007, ಬೆಂಗಳೂರು, ದಿನಾಂಕ: 8ನೇ ಏಪ್ರಿಲ್, 2011**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆಪಾದಿತರಾದ ಶ್ರೀ ಎಸ್.ಜಿ. ಅಮ್ಮಣಗಿ, ಹಿಂದಿನ ತಹಶೀಲ್ದಾರ್ ರಾಮದುರ್ಗ (ಪ್ರಸ್ತುತ ನಿವೃತ್ತ) ಇವರ ವಿರುದ್ಧದ ಶಿಸ್ತು ಪ್ರಕರಣವನ್ನು ಮುಕ್ತಾಯಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಬಾಲಕೃಷ್ಣಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 1207

## ಕಾರ್ಮಿಕ ಸಚಿವಾಲಯ

**ವಿಷಯ:** ಕಾರ್ಮಿಕ ಇಲಾಖೆಯ ಕಾರ್ಮಿಕ ಅಧಿಕಾರಿಗಳಿಗೆ ವಾಹನ ಸೌಲಭ್ಯ ಒದಗಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಕಾಇ 303 ಎಲ್‌ಇಟಿ 2007, ದಿನಾಂಕ:12.02.2008

2. ಕಾರ್ಮಿಕ ಆಯುಕ್ತರು, ಬೆಂಗಳೂರು ಇವರ ಪತ್ರ ಸಂಖ್ಯೆ:ಎಸ್‌ಟಿವೈ/ ಸಿಆರ್–52/2006–07, ದಿನಾಂಕ:17.01.2011

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ:12.02.2008ರಲ್ಲಿ ಕಾರ್ಮಿಕ ಇಲಾಖೆಯ ಜಿಲ್ಲಾ ಮಟ್ಟದ 38 ಕಾರ್ಮಿಕ ಅಧಿಕಾರಿಗಳಿಗೆ 2007–08ನೇ ಸಾಲಿಗೆ ಬಾಹ್ಯ ಮೂಲದಿಂದ ಪ್ರತಿ ತಿಂಗಳು 15 ದಿನಗಳಿಗೆ ಸೀಮಿತಗೊಳಿಸಿ ವಾಹನಗಳನ್ನು ಪಡೆಯುವುದಕ್ಕೆ ಕೆಲವು ಷರತ್ತುಗಳಿಗೆ ಒಳಪಟ್ಟು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಕಾರ್ಮಿಕ ಆಯುಕ್ತರು ಮೇಲೆ(2)ರಲ್ಲಿ ಓದಲಾದ ತಮ್ಮ ದಿನಾಂಕ: 17.01.2011ರ ಪತ್ರದಲ್ಲಿ ಕಾರ್ಮಿಕ ಇಲಾಖೆಯಲ್ಲಿ ಪ್ರಸ್ತುತ 42 ಕಾರ್ಮಿಕ ಅಧಿಕಾರಿಗಳ ವೃಂದ ಬಲವಿದ್ದು, ಈ ಅಧಿಕಾರಿಗಳು 25ಕ್ಕೂ ಹೆಚ್ಚು ವಿವಿಧ ಕಾರ್ಮಿಕ ಕಾನೂನುಗಳ ಸಮಾಚರಣೆಯ ಕಾರ್ಯಭಾರವನ್ನು ಜಿಲ್ಲಾ ಮಟ್ಟದಲ್ಲಿ / ಕ್ಷೇತ್ರ ಮಟ್ಟದಲ್ಲಿ ಕಾರ್ಯ ನಿರ್ವಾಹಕ ಅಧಿಕಾರಿಗಳಾಗಿ ಕಾರ್ಯನಿರ್ವಹಿಸುತ್ತಿರುತ್ತಾರೆ.

ಕಾರ್ಮಿಕ ಅಧಿಕಾರಿಗಳು ಹಲವಾರು ಕಾರ್ಮಿಕ ಕಾನೂನುಗಳನ್ನು ಅನುಷ್ಠಾನಕ್ಕೆ ತರುವ ಅಧಿಕಾರವನ್ನು ಹೊಂದಿದ್ದು, ಕಾನೂನು ಅನುಷ್ಠಾನವನ್ನು ತರುವುದರ ಜೊತೆಗೆ ತಮ್ಮ ಅಧೀನದಲ್ಲಿ ಕೆಲಸ ನಿರ್ವಹಿಸುತ್ತಿರುವ ಹಿರಿಯ ಕಾರ್ಮಿಕ ನಿರೀಕ್ಷಕರು / ಕಾರ್ಮಿಕ ನಿರೀಕ್ಷಕರುಗಳು ಅನುಷ್ಠಾನ ಮಾಡುತ್ತಿರುವ ಕೆಲಸವನ್ನು ಮೇಲ್ವಿಚಾರಿಸಬೇಕಾಗಿರುತ್ತದೆ. ಈ ನಿಟ್ಟಿನಲ್ಲಿ ಅನೇಕ ಸಂಘ ಸಂಸ್ಥೆಗಳು, ಕಾರ್ಖಾನೆ ಗ್ರಾಮೀಣ ಪ್ರದೇಶದಲ್ಲಿ ವ್ಯಾಪಿಸಿರುತ್ತವೆ. ಅಲ್ಲಿಗೆ ಸಕಾಲದಲ್ಲಿ ಹೋಗಿ ಪರಿಣಾಮಕಾರಿಯಾಗಿ ಪರಿವೀಕ್ಷಣೆ ಮಾಡುವುದು ಕಷ್ಟವಾಗಿರುತ್ತದೆ. ಈ ಉದ್ದೇಶಕ್ಕಾಗಿ ವಾಹನದ ಅಗತ್ಯತೆ ಇರುತ್ತದೆ.

ಇತ್ತೀಚಿನ ಕೆಲವು ವರ್ಷಗಳಿಂದ ಬಾಲ ಕಾರ್ಮಿಕ ಪದ್ಧತಿ ನಿರ್ಮೂಲನೆಗೊಳಿಸಲು ಪ್ರತಿ ಮಾಹೆ ಒಂದು ವಾರದ ಅವಧಿಯಲ್ಲಿ ನಿರೀಕ್ಷಣಾ ಆಂದೋಲನದ ನೇತೃತ್ವವನ್ನು ವಹಿಸಬೇಕಾಗಿರುತ್ತದೆ. ಕಾರ್ಯ ವ್ಯಾಪ್ತಿಯ ಮೂಲೆ ಮೂಲೆಯಲ್ಲಿ ಬಾಲ ಕಾರ್ಮಿಕರನ್ನು ನೇಮಿಸಿಕೊಂಡಿರುವ ಬಗ್ಗೆ ಪರಿವೀಕ್ಷಣೆ ಕೈಗೊಳ್ಳಬೇಕಾಗಿರುತ್ತದೆ. ಇದರ ಜೊತೆಗೆ ಜಿಲ್ಲಾಧಿಕಾರಿಗಳು ವಹಿಸುವ ಕೆಲಸವನ್ನು ನಿರ್ವಹಿಸಬೇಕಾಗಿರುತ್ತದೆ.

ಜಿಲ್ಲಾದ್ಯಂತ ಕಾರ್ಮಿಕ ಇಲಾಖೆಗೆ ಸಂಬಂಧಪಟ್ಟ ಆಡಳಿತಾತ್ಮಕ ಕೆಲಸವನ್ನು ನಿರ್ವಹಿಸಬೇಕಾಗುತ್ತದೆ. ಇತರೇ ಕೆಲಸಗಳು ಅಂದರೆ, ಮುಷ್ಕರ, ಬೀಗಮುದ್ರೆ, ಕೆಲಸದ ನಡವಳಿ, ಮುಷ್ಕರ ಮತ್ತು ಬೀಗ ಮುದ್ರೆಯಲ್ಲಿ ಸಂಭವಿಸಬಹುದಾದ ದುರ್ಘಟನೆಯ ವಿವರಗಳನ್ನು ಪ್ರಮಾಣಿಕವಾದ ವಿವರಗಳೊಂದಿಗೆ ಸಂಗ್ರಹಿಸಬೇಕಾಗಿರುತ್ತದೆ. ಜಿಲ್ಲಾದ್ಯಂತ ತಾಲ್ಲೂಕು ಸ್ಥಳಗಳಲ್ಲಿರುವ ಕಾರ್ಮಿಕ ನಿರೀಕ್ಷಕರ ಕಛೇರಿಗಳ ಲಘು ತಪಾಸಣೆ ಹಠಾತ್ತನೆ ಕೈಗೊಳ್ಳಬೇಕಾಗಿರುತ್ತದೆ ಹಾಗೂ ಹಲವಾರು ಕಾರ್ಮಿಕ ಕಾಯ್ದೆಯ ಅಡಿಯಲ್ಲಿ ಸಾರ್ವಜನಿಕರು ಸಲ್ಲಿಸಿದ ದೂರು ಅರ್ಜಿಯನ್ನು ವಿಚಾರಿಸಿ, ಅಗತ್ಯ ವಿಚಾರಣೆ ನಡೆಸಿ, ಪರಿಹಾರ ಸಿಗುವಂತೆ, ಕ್ರಮ ವಹಿಸಬೇಕಾಗಿರುತ್ತದೆ.

ಕಾರ್ಮಿಕ ಅಧಿಕಾರಿಗಳು ಅರೆ ಸರ್ಕಾರಿ ನ್ಯಾಯಾಂಗದ ಹಲವಾರು ಕಾನೂನು ಅಡಿಯಲ್ಲಿನ ಪ್ರಕರಣಗಳನ್ನು ವಿಚಾರಿಸಿ ವಿಲೇವಾರಿ ಮಾಡಬೇಕಾಗಿರುತ್ತದೆ. ಕೆಲವು ಸಲ ಅರ್ಜಿದಾರರಿಗೆ ಮತ್ತು ಎದುರುದಾರರಿಗೆ ನ್ಯಾಯ ಒದಗಿಸಲು ಅವರಿಗೆ ಸಮೀಪವಿರುವ ತಾಲ್ಲೂಕು ಸ್ಥಳದಲ್ಲಿ ವಿಚಾರಣೆಯನ್ನು ಕೈಗೊಳ್ಳಬೇಕಾಗಿರುತ್ತದೆ.

ಈ ಮೇಲಿನ ಎಲ್ಲಾ ಕೆಲಸಗಳನ್ನು ತ್ವರಿತ ಹಾಗೂ ಪರಿಣಾಮಕಾರಿಯಾಗಿ ನಿರ್ವಹಿಸಿ, ಸಂಬಂಧಪಟ್ಟವರಿಗೆ ಪರಿಹಾರ ಒದಗಿಸಲು ಕಾರ್ಮಿಕ ಅಧಿಕಾರಿಗಳಿಗೆ ಪೂರ್ತಿ ಮಾಹೆಯವರೆಗೂ ವಾಹನ ಒದಗಿಸಬೇಕಾದ ಅಗತ್ಯತೆ ಇರುತ್ತದೆಯೆಂದು ತಿಳಿಸುತ್ತಾ, ಕಾರ್ಮಿಕ ಇಲಾಖೆಯಲ್ಲಿ ಒಟ್ಟು 42 ಜನ ಕಾರ್ಮಿಕ ಅಧಿಕಾರಿ ವೃಂದ ಬಲವಿದ್ದು 41 ಜನ ಕಾರ್ಮಿಕ ಅಧಿಕಾರಿಗಳು ಕ್ಷೇತ್ರಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಈ ಕೆಳಕಂಡ 41 ಜನ ಕಾರ್ಮಿಕ ಅಧಿಕಾರಿಗಳಿಗೆ ವಾಹನವನ್ನು ಬಾಡಿಗೆ ಆಧಾರದ ಮೇಲೆ ಪ್ರತಿ ತಿಂಗಳ 15 ದಿನಗಳ ಬದಲು ಪೂರ್ಣ ಮಾಹೆಗೆ ಅನ್ವಯಿಸುವಂತೆ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 139 ಶಿವಾನಿ 2004, ದಿನಾಂಕ:12.09.2006ರನ್ವಯ ಬಾಡಿಗೆ ಆಧಾರದ ಮೇಲೆ ವಾಹನ ಸೇವೆ ಒದಗಿಸಲು ಪ್ರತಿ ಮಾಹೆಗೆ 8,20,000–00ರೂ.ಗಳಾಗುತ್ತಿದ್ದು, ಬಾಡಿಗೆ ಆಧಾರದ ಮೇಲೆ ವಾಹನ ಸೇವೆ ಒದಗಿಸಲು ಸರ್ಕಾರದ ಮಂಜೂರಾತಿಯೊಂದಿಗೆ ಅಗತ್ಯವಾಗಿರುವ ಆಯವ್ಯಯವನ್ನು ಬಿಡುಗಡೆ ಮಾಡಿ ಪರಿಷ್ಕೃತ ಆದೇಶ ಹೊರಡಿಸುವಂತೆ ಕಾರ್ಮಿಕ ಆಯುಕ್ತರು ಕೋರಿರುತ್ತಾರೆ.

1. ಕಾರ್ಮಿಕ ಅಧಿಕಾರಿ, ಉಪ ವಿಭಾಗ –1, ಬೆಂಗಳೂರು.
2. ಕಾರ್ಮಿಕ ಅಧಿಕಾರಿ, ಉಪ ವಿಭಾಗ –2, ಬೆಂಗಳೂರು
3. ಕಾರ್ಮಿಕ ಅಧಿಕಾರಿ, ಉಪ ವಿಭಾಗ –3, ಬೆಂಗಳೂರು.
4. ಕಾರ್ಮಿಕ ಅಧಿಕಾರಿ, ಉಪ ವಿಭಾಗ –4, ಬೆಂಗಳೂರು.
5. ಕಾರ್ಮಿಕ ಅಧಿಕಾರಿ, ಉಪ ವಿಭಾಗ –5, ಬೆಂಗಳೂರು.
6. ಕಾರ್ಮಿಕ ಅಧಿಕಾರಿ, ಉಪ ವಿಭಾಗ –6, ಬೆಂಗಳೂರು.
7. ಕಾರ್ಮಿಕ ಅಧಿಕಾರಿ, ಉಪ ವಿಭಾಗ –1, ಬಳ್ಳಾರಿ.
8. ಕಾರ್ಮಿಕ ಅಧಿಕಾರಿ, ಉಪ ವಿಭಾಗ –2, ಬಳ್ಳಾರಿ.
9. ಕಾರ್ಮಿಕ ಅಧಿಕಾರಿ, ಉಪ ವಿಭಾಗ –1, ಮಂಗಳೂರು.
10. ಕಾರ್ಮಿಕ ಅಧಿಕಾರಿ, ಉಪ ವಿಭಾಗ –2, ಮಂಗಳೂರು.

22. ಕಾರ್ಮಿಕ ಅಧಿಕಾರಿ, ಕಾರವಾರ.
23. ಕಾರ್ಮಿಕ ಅಧಿಕಾರಿ, ಗುಲ್ಬರ್ಗಾ.
24. ಕಾರ್ಮಿಕ ಅಧಿಕಾರಿ, ತುಮಕೂರು.
25. ಕಾರ್ಮಿಕ ಅಧಿಕಾರಿ, ಹಾಸನ.
26. ಕಾರ್ಮಿಕ ಅಧಿಕಾರಿ, ರಾಯಚೂರು.
27. ಕಾರ್ಮಿಕ ಅಧಿಕಾರಿ, ದಾವಣಗೆರೆ.
28. ಕಾರ್ಮಿಕ ಅಧಿಕಾರಿ, ಕೋಲಾರ.
29. ಕಾರ್ಮಿಕ ಅಧಿಕಾರಿ, ಮಡಿಕೇರಿ.
30. ಕಾರ್ಮಿಕ ಅಧಿಕಾರಿ, ಶಿವಮೊಗ್ಗ.
31. ಕಾರ್ಮಿಕ ಅಧಿಕಾರಿ, ಬೀದರ್.

11. ಕಾರ್ಮಿಕ ಅಧಿಕಾರಿ, ಉಪ ವಿಭಾಗ –1, ಹುಬ್ಬಳ್ಳಿ.
12. ಕಾರ್ಮಿಕ ಅಧಿಕಾರಿ, ಉಪ ವಿಭಾಗ –2, ಹುಬ್ಬಳ್ಳಿ.
13. ಕಾರ್ಮಿಕ ಅಧಿಕಾರಿ, ಉಪ ವಿಭಾಗ –1, ಚಿಕ್ಕಮಗಳೂರು.
14. ಕಾರ್ಮಿಕ ಅಧಿಕಾರಿ, ಉಪ ವಿಭಾಗ –2, ಚಿಕ್ಕಮಗಳೂರು.
15. ಕಾರ್ಮಿಕ ಅಧಿಕಾರಿ, ಉಪ ವಿಭಾಗ –1, ಮಂಡ್ಯ.
16. ಕಾರ್ಮಿಕ ಅಧಿಕಾರಿ, ಉಪ ವಿಭಾಗ –2, ಮಂಡ್ಯ.
17. ಕಾರ್ಮಿಕ ಅಧಿಕಾರಿ, ಉಪ ವಿಭಾಗ –1, ಬಿಜಾಪುರ.
18. ಕಾರ್ಮಿಕ ಅಧಿಕಾರಿ, ಉಪ ವಿಭಾಗ –2, ಬಿಜಾಪುರ.
19. ಕಾರ್ಮಿಕ ಅಧಿಕಾರಿ, ಉಪ ವಿಭಾಗ –1, ಬೆಳಗಾಂ.
20. ಕಾರ್ಮಿಕ ಅಧಿಕಾರಿ, ಉಪ ವಿಭಾಗ –2, ಬೆಳಗಾಂ.
21. ಕಾರ್ಮಿಕ ಅಧಿಕಾರಿ, ಮೈಸೂರು.
32. ಕಾರ್ಮಿಕ ಅಧಿಕಾರಿ, ಗದಗ.
33. ಕಾರ್ಮಿಕ ಅಧಿಕಾರಿ, ಉಡುಪಿ.
34. ಕಾರ್ಮಿಕ ಅಧಿಕಾರಿ, ಬಾಗಲಕೋಟೆ.
35. ಕಾರ್ಮಿಕ ಅಧಿಕಾರಿ, ಚಿತ್ರದುರ್ಗ.
36. ಕಾರ್ಮಿಕ ಅಧಿಕಾರಿ, ಹಾವೇರಿ.
37. ಕಾರ್ಮಿಕ ಅಧಿಕಾರಿ, ಕೊಪ್ಪಳ.
38. ಕಾರ್ಮಿಕ ಅಧಿಕಾರಿ, ಚಾಮರಾಜನಗರ.
39. ಕಾರ್ಮಿಕ ಅಧಿಕಾರಿ, ರಾಮನಗರ.
40. ಕಾರ್ಮಿಕ ಅಧಿಕಾರಿ, ಚಿಕ್ಕಬಳ್ಳಾಪುರ.
41. ಕಾರ್ಮಿಕ ಅಧಿಕಾರಿ, ಯಾದಗಿರಿ.

ಸರ್ಕಾರವು ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 19 ಎಲ್ಇಟಿ 2011, ಬೆಂಗಳೂರು, ದಿನಾಂಕ: 27ನೇ ಏಪ್ರಿಲ್, 2011**

ಕಾರ್ಮಿಕ ಇಲಾಖೆಯ ಜಿಲ್ಲಾ ಮಟ್ಟದ ಅಧಿಕಾರಿಗಳಾದ ಕಾರ್ಮಿಕ ಅಧಿಕಾರಿಗಳು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ಸಮರ್ಪಕವಾಗಿ ನಿರ್ವಹಿಸಲು ಅನುಕೂಲವಾಗುವಂತೆ ಮೇಲೆ ಪ್ರಸ್ತಾವನೆಯಲ್ಲಿ ತಿಳಿಸಲಾಗಿರುವ 41 ಜನ ಕಾರ್ಮಿಕ ಅಧಿಕಾರಿಗಳಿಗೆ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 139 ಶಿವಾನಿ 2004, ದಿನಾಂಕ: 12.09.2006ರನ್ವಯ ಮಾಸಿಕ ರೂ.20,000–00/–ಗಳ ಮಿತಿಯಲ್ಲಿ ಬಾಹ್ಯ ಮೂಲದಿಂದ ತಿಂಗಳು ಪೂರ್ತಾ ವಾಹನಗಳನ್ನು ಬಾಡಿಗೆ ಆಧಾರದ ಮೇಲೆ ಪಡೆಯುವುದಕ್ಕೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

1. ಆಡಳಿತ ಇಲಾಖೆಯು ಈ ವೆಚ್ಚವನ್ನು ಇಲಾಖೆಗೆ ಒದಗಿಸಲಾದ ಆಯವ್ಯಯದಲ್ಲಿ ಅಂದರೆ ಲೆಕ್ಕಶೀರ್ಷಿಕೆ 2230–01–101–0–01–195 – ಸಾರಿಗೆ ವೆಚ್ಚಗಳು – ಯೋಜನೆ – ಅಡಿಯಲ್ಲಿ ಭರಿಸತಕ್ಕದ್ದು.
2. ಸರ್ಕಾರವು ಇದಕ್ಕೆ ಸಂಬಂಧಿಸಿದಂತೆ ಹೆಚ್ಚುವರಿ ಆಯವ್ಯಯವನ್ನು ಈ ಸಾಲಿನಲ್ಲಿ ಒದಗಿಸಿರುವುದಿಲ್ಲ.
3. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಹೊರಡಿಸಿರುವ ಸುತ್ತೋಲೆಯಲ್ಲಿ ನಿಗದಿಪಡಿಸಿರುವ ದರಗಳಂತೆ ವಾಹನವನ್ನು ಬಾಹ್ಯ ಮೂಲಗಳಿಂದ ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 158 ವೆಚ್ಚ–9 2011, ದಿನಾಂಕ:31.03.2011ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1208

**ಯು.ಎನ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:** ಶ್ರೇಷ್ಠ ಸಂಶೋಧನಾ ಪ್ರಬಂಧಗಳಿಗೆ ಪ್ರಶಸ್ತಿ ಪ್ರಧಾನ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ವಿಯಇ 50 ವಿತ್ರಮ 2010, ದಿನಾಂಕ:13/04/2010.
2) ಸರ್ಕಾರದ ಆದೇಶ ಸಂಖ್ಯೆ:ವಿಯಇ 33 ವಿತ್ರಮ 2009, ದಿನಾಂಕ:21/05/2010.
3) ಸರ್ಕಾರದ ಆದೇಶ ಸಂಖ್ಯೆ:ವಿಯಇ 40 ವಿತ್ರಮ 2010, ದಿನಾಂಕ:25/05/2010.
4) ಸರ್ಕಾರದ ಆದೇಶ ಸಂಖ್ಯೆ:ವಿಯಇ 171 ವಿತ್ರಮ 2010, ದಿನಾಂಕ: 25/10/2010.
5) ಕಾರ್ಯನಿರ್ವಾಹಕ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ ಇವರ ಪತ್ರ ಸಂಖ್ಯೆ: VGST/P-13/ARP/2010–11/613, ದಿ: 19.02.2011.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳನ್ನು ಮುಂದುವರೆಸಿ 2010–11ನೇ ಸಾಲಿಗೆ ಅನುಷ್ಠಾನಗೊಳಿಸಲು ಆದೇಶ ಹೊರಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ 2010–11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 3425–60–600–0–02 (059) (ಯೋ) ಇದರಡಿಯಲ್ಲಿ ಒಟ್ಟು ರೂ.10.00 ಕೋಟಿಗಳ ಅನುದಾನವನ್ನು ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಯೋಜನೆಗಳಿಗಾಗಿ ಕಲ್ಪಿಸಲಾಗಿದ್ದು, ಇದರ ಅನುಷ್ಠಾನಕ್ಕಾಗಿ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಲಾಗಿದೆ.

ಮೇಲೆ (3) ಮತ್ತು (4)ರಲ್ಲಿ ಓದಲಾದ ಆದೇಶದಲ್ಲಿ 2010–11ನೇ ಸಾಲಿನಲ್ಲಿ ಶ್ರೇಷ್ಠ ಸಂಶೋಧನಾ ಪ್ರಬಂಧಗಳಿಗೆ (Award for Research Publication (ARP) ಪ್ರಶಸ್ತಿ ಪ್ರದಾನ ಮಾಡುವ ಸಲುವಾಗಿ ರೂ.5.00 ಲಕ್ಷಗಳನ್ನು ಬಿಡುಗಡೆ ಮಾಡಿದೆ.

ಮೇಲೆ (5)ರಲ್ಲಿ ಓದಲಾದ ಕಾರ್ಯನಿರ್ವಾಹಕ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ, ಬೆಂಗಳೂರು. ಇವರ ಪತ್ರದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಮಾರ್ಗಸೂಚಿಯನ್ವಯ ಪ್ರಸ್ತಾಪಿಸಿರುವ ಕಾರ್ಯಕ್ರಮದಡಿ ಪ್ರಶಸ್ತಿಗಾಗಿ ಅರ್ಜಿಗಳನ್ನು ಆಹ್ವಾನಿಸಿದ್ದು, ನಿಗದಿಪಡಿಸಿದ ಕೊನೆಯ ದಿನಾಂಕ: 14/10/2010ರೊಳಗೆ 55 ಅರ್ಜಿಗಳನ್ನು ಸ್ವೀಕರಿಸಲಾಗಿದ್ದು, ಸದರಿ ಅರ್ಜಿಗಳನ್ನು ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹವು ರಚಿಸಿದ ಉಪ ಸಮಿತಿಯು ದಿನಾಂಕ:14–02–2011ರಂದು ಮಾರ್ಗಸೂಚಿಯನ್ವಯ ಅರ್ಜಿಗಳನ್ನು ಪರಿಶೀಲಿಸಿ, ಈ ಕೆಳಕಂಡ 8 ಅರ್ಹ ಪ್ರಸ್ತಾವನೆಗಳನ್ನು ಶಿಫಾರಸ್ಸುಗೊಳಿಸಿದ್ದು ಆಯ್ಕೆಗೊಂಡ ಸಂಶೋಧನಾ ಪ್ರಬಂಧಗಳಿಗೆ ತಲಾ ರೂ.25,000/– ಮೊತ್ತದ ನಗದು ಪ್ರಶಸ್ತಿ ನೀಡಲು ಸರ್ಕಾರದಿಂದ ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

| ಕ್ರಮ ಸಂಖ್ಯೆ | ವಿಳಾಸ | ಸಂಶೋಧನಾ ವಿಷಯಗಳು |
|---|---|---|
| 1 | ಪ್ರೊ. ಕುರುಬ ಶ್ರೀರಾಮುಲು<br>ಜೀವಿ–ರಸಾಯನಶಾಸ್ತ್ರ ವಿಭಾಗ, ಗುಲ್ಬರ್ಗ ವಿಶ್ವವಿದ್ಯಾನಿಲಯ, ಗುಲ್ಬರ್ಗ–585 106 | P-glycoprotein ATPase from the resistant pest, Helicoverpa armigera Purification, characterization and effect of various insecticides on its transport function |
| 2 | ಪ್ರೊ. ಗೋಮತಿ ದೇವಿ<br>ರಸಾಯನಶಾಸ್ತ್ರ ವಿಭಾಗ, ಸೆಂಟ್ರಲ್ ಕಾಲೇಜು ಆವರಣ, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು–560 001 | Preparation and Characterization of MN Doped Titanates with Bicrytalline Framework: Correlation of Crystallite size with Synergistic Effect on Photocatalytic Activity. |
| 3 | ಡಾ: ಪಿ.ಎಮ್. ಪಾಟೀಲ್<br>ಗಣಿತ ವಿಭಾಗ, ಜೆ.ಎಸ್.ಎಸ್. ಕಾಲೇಜು, ವಿದ್ಯಾಗಿರಿ, ಧಾರವಾಡ–580 004 | Unsteady mixed convection flow from a moving vertical plate in a parallel stream: Influence of heat generation or absorption. |
| 4 | ಪ್ರೊ. ಸಿ.ಎಸ್. ರಮೇಶ್<br>ಮೆಕ್ಯಾನಿಕಲ್ ಇಂಜಿನಿಯರಿಂಗ್ ವಿಭಾಗ, ಪಿ.ಇ.ಎಸ್. ಇನ್ಸ್‌ಟಿಟ್ಯೂಟ್ ಆಫ್ ಟೆಕ್ನಾಲಜಿ, ಬನಶಂಕರಿ 3ನೇ ಹಂತ, ಬೆಂಗಳೂರು–560 085 | Friction and Wear behaviour of NI-P coated Silicon Nitride ($Si_3N_4$) reinforced AL6061 Composites. |
| 5 | ಪ್ರೊ. ಮಹದೇವಪ್ಪಾ ವೈ. ಕರಿದುರ್ಗನವರ್<br>ರಸಾಯನಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–580 003 | Synthesis and Nonlinear optical properties of Polyurethanes containing Nitro-Substituted 1,3,4,-Oxadiazole chromophores |
| 6 | ಡಾ: ಎಸ್.ಎಸ್. ಕುಬಕಡ್ಡಿ<br>ಭೌತಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ–580 003 | Interaction of massless Dirac Electrons with acoustic phonons in graphene at low Temperatures |
| 7 | ಡಾ: ಡಿ.ಎಸ್. ಗುರು<br>ಕಂಪ್ಯೂಟರ್ ಸೈನ್ಸ್ ವಿಭಾಗ, ಮೈಸೂರು, ವಿಶ್ವವಿದ್ಯಾನಿಲಯ, ಮಾನಸ ಗಂಗೋತ್ರಿ, ಮೈಸೂರು–570 006 | Online Signature verification & Recognition: An approach based on symbolic representation. |
| 8 | ಡಾ: ಹೆಚ್. ನಿರಂಜನ ಮೂರ್ತಿ<br>ಸಸ್ಯಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ–580 003 | Establishment of cell Suspension cultures of Withania Somnifera for the production of withanolide A. |

ಉಪ ಸಮಿತಿಯ ಶಿಫಾರಸ್ಸಿನಂತೆ 2010–11ನೇ ಸಾಲಿನಲ್ಲಿ ಶ್ರೇಷ್ಠ ಸಂಶೋಧನಾ ಪ್ರಬಂಧಗಳಿಗೆ (Award for Research Publication (ARP) ಪ್ರಶಸ್ತಿ ಪ್ರದಾನ ಮಾಡುವ ಸಲುವಾಗಿ ಮೇಲಿನ ಎಂಟು ಅಭ್ಯರ್ಥಿಗಳ ಪ್ರಸ್ತಾವನೆಗಳನ್ನು ಅನುಮೋದಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಿಯಇ 40 ವಿತ್ರಮ 2010, ಬೆಂಗಳೂರು, ದಿನಾಂಕ: 18ನೇ ಏಪ್ರಿಲ್, 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಯೋಜನೆಯಡಿ 2010–11ನೇ ಸಾಲಿನಲ್ಲಿ ಅನುಬಂಧ "ಅ" ರಲ್ಲಿ ವಿವರಿಸಿರುವ ಎಂಟು ಅರ್ಹ ಫಲಾನುಭವಿಗಳ ಶ್ರೇಷ್ಠ ಸಂಶೋಧನಾ ಪ್ರಬಂಧಗಳಿಗೆ ತಲಾ ರೂ.25,000/–ಗಳಂತೆ ಒಟ್ಟು 2.00 ಲಕ್ಷಗಳ ನಗದು ಪ್ರಶಸ್ತಿಯನ್ನು ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹವು ಬಿಡುಗಡೆ ಮಾಡಲು ಈ ಕೆಳಕಂಡ ನಿಬಂಧನೆ ಮೇರೆಗೆ ಸರ್ಕಾರದ ಅನುಮೋದನೆ ನೀಡಲಾಗಿದೆ.

1) ಈ ಯೋಜನೆಯ ಅನುಷ್ಠಾನದ ಸಲುವಾಗಿ ಬಿಡುಗಡೆ ಮಾಡಿರುವ ಹಣವು ಸದ್ಬಳಕೆಯಾಗದಿದ್ದರೆ ಅಥವಾ ಈ ಯೋಜನೆ ಅನುಷ್ಠಾನವನ್ನು ಮಧ್ಯದಲ್ಲಿ ರದ್ದುಪಡಿಸಿದರೆ ಸರ್ಕಾರದಿಂದ ನೀಡಲಾದ ಆರ್ಥಿಕ ಸೌಲಭ್ಯವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

2) ಈ ಯೋಜನೆಯ ಅನುಷ್ಠಾನಕ್ಕೆ ಅನುದಾನವನ್ನು ಸದುಪಯೋಗ ಮಾಡಿಕೊಂಡಿದ್ದಕ್ಕೆ ಲೆಕ್ಕ ಪರಿಶೋಧಿತ ಉಪಯೋಗತಾ ಪ್ರಮಾಣ ಪತ್ರಗಳನ್ನು ನಿಗದಿತ ಕಾಲಮಿತಿಯಲ್ಲಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು,

3) ಸರ್ಕಾರದಿಂದ ಯಾವ ಉದ್ದೇಶಕ್ಕಾಗಿ ಅನುದಾನ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದು,

ಈ ಆದೇಶವನ್ನು ಆರ್ಥಿಕ ಇಲಾಖೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ:16/05/2008ರ ಅಡಿಯಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಪ್ರದತ್ತವಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಬೋರಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ವಿಯಇ 40 ವಿತ್ರಮ 2010, ಬೆಂಗಳೂರು ದಿನಾಂಕ: 18–04–2011.**

**ಅನುಬಂಧ – ಅ**

| ಕ್ರಮ ಸಂಖ್ಯೆ | ವಿಳಾಸ | ಸಂಶೋಧನಾ ವಿಷಯಗಳು |
|---|---|---|
| 1 | ಪ್ರೊ. ಕುರುಬ ಶ್ರೀರಾಮುಲು<br>ಜೀವಿ–ರಸಾಯನಶಾಸ್ತ್ರ ವಿಭಾಗ, ಗುಲ್ಬರ್ಗ ವಿಶ್ವವಿದ್ಯಾನಿಲಯ, ಗುಲ್ಬರ್ಗ–585 106 | P-glycoprotein ATPase from the resistant pest, Helicoverpa armigera Purification, characterization and effect of various insecticides on its transport function |
| 2 | ಪ್ರೊ. ಗೋಮತಿ ದೇವಿ,<br>ರಸಾಯನಶಾಸ್ತ್ರ ವಿಭಾಗ, ಸೆಂಟ್ರಲ್ ಕಾಲೇಜು ಆವರಣ, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು–560 001 | Preparation and Characterization of MN Doped Titanates with Bicrytalline Framework: Correlation of Crystallite size with Synergistic Effect on Photocatalytic Activity. |
| 3 | ಡಾ: ಪಿ.ಎಮ್. ಪಾಟೀಲ್,<br>ಗಣಿತ ವಿಭಾಗ, ಜೆ.ಎಸ್.ಎಸ್. ಕಾಲೇಜು, ವಿದ್ಯಾಗಿರಿ, ಧಾರವಾಡ–580 004 | Unsteady mixed convection flow from a moving vertical plate in a parallel stream: Influence of heat generation or absorption. |
| 4 | ಪ್ರೊ. ಸಿ.ಎಸ್. ರಮೇಶ್,<br>ಮೆಕ್ಯಾನಿಕಲ್ ಇಂಜಿನಿಯರಿಂಗ್ ವಿಭಾಗ, ಪಿ.ಇ.ಎಸ್. ಇನ್ಸ್‌ಟಿಟ್ಯೂಟ್ ಆಫ್ ಟೆಕ್ನಾಲಜಿ, ಬನಶಂಕರಿ 3ನೇ ಹಂತ, ಬೆಂಗಳೂರು–560 085 | Friction and Wear behaviour of NI-P coated Silicon Nitride ($Si_3N_4$) reinforced AL6061 Composites. |
| 5 | ಪ್ರೊ. ಮಹದೇವಪ್ಪಾ ವೈ. ಕರಿದುರ್ಗನವರ್<br>ರಸಾಯನಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–580 003 | Synthesis and Nonlinear optical properties of Polyurethanes containing Nitro-Substituted 1,3,4,-Oxadiazole chromophores |
| 6 | ಡಾ: ಎಸ್.ಎಸ್. ಕುಬಕಡ್ಡಿ,<br>ಭೌತಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ–580 003 | Interaction of massless Dirac Electrons with acoustic phonons in graphene at low Temperatures |
| 7 | ಡಾ: ಡಿ.ಎಸ್. ಗುರು,<br>ಕಂಪ್ಯೂಟರ್ ಸೈನ್ಸ್ ವಿಭಾಗ, ಮೈಸೂರು, ವಿಶ್ವವಿದ್ಯಾನಿಲಯ, ಮಾನಸ ಗಂಗೋತ್ರಿ, ಮೈಸೂರು–570 006 | Online Signature verification & Recognition: An approach based on symbolic representation. |
| 8 | ಡಾ: ಹೆಚ್. ನಿರಂಜನ ಮೂರ್ತಿ<br>ಸಸ್ಯಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ–580 003 | Establishment of cell Suspension cultures of Withania Somnifera for the production of withanolide A. |

**ಕೆ. ಬೋರಲಿಂಗಯ್ಯ**

ಪಿ.ಆರ್. 1209

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:** ವಿಜ್ಞಾನ ಇಂಜಿನಿಯರಿಂಗ್ ಮತ್ತು ವೈದ್ಯಕೀಯದ ಶ್ರೇಷ್ಠ ಕೇಂದ್ರಗಳ (Establishment of centres of Excellence in Science Engineering and Medicine (CESEM) ಸ್ಥಾಪಿಸುವ ಯೋಜನೆಯನ್ನು ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ವಿಯಇ 50 ವಿತ್ರಮ 2010, ದಿನಾಂಕ: 13/04/2010.
2) ಸರ್ಕಾರದ ಆದೇಶ ಸಂಖ್ಯೆ: ವಿಯಇ 33 ವಿತ್ರಮ 2009, ದಿನಾಂಕ: 21/05/2010.
3) ಸರ್ಕಾರದ ಆದೇಶ ಸಂಖ್ಯೆ: ವಿಯಇ 170 ವಿತ್ರಮ 2010, ದಿನಾಂಕ: 25/10/2010 ಮತ್ತು ದಿನಾಂಕ: 30.12.2010.
4) ಕಾರ್ಯನಿರ್ವಾಹಕ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ ಇವರ ಪತ್ರ ಸಂಖ್ಯೆ: VGST/P-14/CESEM/2010–11/660, ದಿ: 14.03.2011.
5) ಸರ್ಕಾರದ ಆದೇಶ ಸಂಖ್ಯೆ: ವಿಯಇ 31 ವಿತ್ರಮ 2010, ದಿನಾಂಕ: 18.3.2010.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ, ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳನ್ನು ಮುಂದುವರೆಸಿ 2010–11ನೇ ಸಾಲಿಗೆ ಅನುಷ್ಠಾನಗೊಳಿಸಲು ಆದೇಶ ಹೊರಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ 2010–11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 3425–60–600–0–02 (059) (ಯೋ) ಇದರಡಿಯಲ್ಲಿ ಒಟ್ಟು ರೂ.10.00 ಕೋಟಿಗಳ ಅನುದಾನವನ್ನು ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಯೋಜನೆಗಳಿಗಾಗಿ ಕಲ್ಪಿಸಲಾಗಿದ್ದು, ಇದರ ಅನುಷ್ಠಾನಕ್ಕಾಗಿ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಲಾಗಿದೆ.

ಮೇಲೆ (3)ರಲ್ಲಿ ಓದಲಾದ ಆದೇಶಗಳಲ್ಲಿ 2010–11ನೇ ವಿಜ್ಞಾನ ಇಂಜಿನಿಯರಿಂಗ್ ಮತ್ತು ವೈದ್ಯಕೀಯದ ಶ್ರೇಷ್ಠ ಕೇಂದ್ರಗಳನ್ನು (Establishment of Centres of Excellence in Science Engineering and Medicine (CESEM) ಸ್ಥಾಪಿಸುವ ಯೋಜನೆಯ ಅನುಷ್ಠಾನಕ್ಕಾಗಿ ರೂ.200.00 ಲಕ್ಷಗಳ ಸಹಾಯಾನುದಾನವನ್ನು ಬಿಡುಗಡೆ ಮಾಡಿದೆ.

ಮೇಲೆ (4)ರಲ್ಲಿ ಓದಲಾದ ಕಾರ್ಯನಿರ್ವಾಹಕ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ, ಬೆಂಗಳೂರು. ಇವರ ಪತ್ರದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಮಾರ್ಗಸೂಚಿಯನ್ವಯ 2010–11ನೇ ಸಾಲಿಗೆ ವಿಜ್ಞಾನ ಇಂಜಿನಿಯರಿಂಗ್ ಮತ್ತು ವೈದ್ಯಕೀಯ ಶ್ರೇಷ್ಠ ಕೇಂದ್ರಗಳ ಸ್ಥಾಪಿಸುವ (CESEM) ಯೋಜನೆಯನ್ನು ಅನುಷ್ಠಾನಗೊಳಿಸುವ ಸಲುವಾಗಿ ನಿಗದಿಪಡಿಸಿದ ಕೊನೆಯ ದಿನಾಂಕ: 14/10/2010ರೊಳಗೆ ಒಟ್ಟು 70 ಪ್ರಸ್ತಾವನೆಗಳನ್ನು ಸ್ವೀಕರಿಸಲಾಗಿದ್ದು, ಸದರಿ ಪ್ರಸ್ತಾವನೆಗಳನ್ನು ವಿ.ತಂ.ದಾ.ಸ.ದ ಉಪ–ಸಮಿತಿಯು ದಿನಾಂಕ: 01–02–2011ರಂದು ಉದ್ದೇಶಿತ ಯೋಜನೆಯ ಮಾರ್ಗಸೂಚಿಯನ್ವಯ ಪ್ರಸ್ತಾವನೆಗಳನ್ನು ಪರಿಶೀಲಿಸಿ ಈ ಕೆಳಕಂಡ 5 ಅರ್ಹ ಪ್ರಸ್ತಾವನೆಗಳನ್ನು ಶಿಫಾರಸ್ಸು ಮಾಡಿದ್ದು, ಆಯಾಯ ಸಂಸ್ಥೆಗಳಿಗೆ ಮೊದಲನೇ ಕಂತಾಗಿ ತಲಾ ರೂ.20.00 ಲಕ್ಷಗಳನ್ನು ಹಾಗೂ ಮೇಲೆ ಓದಲಾದ (5)ರ ಆದೇಶದ ರೀತ್ಯಾ 2009–10ನೇ ಸಾಲಿನಲ್ಲಿ ಸ್ಥಾಪಿಸಲಾದ 5 ಕೇಂದ್ರಗಳಿಗೆ ತಲಾ ರೂ.20.00 ಲಕ್ಷಗಳಂತೆ ಎರಡನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡಲು ಸರ್ಕಾರದಿಂದ ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

**2010–11ನೇ ಸಾಲಿಗೆ ಉಪ–ಸಮಿತಿಯು ಶಿಫಾರಸ್ಸು ಮಾಡಿದ 5 ಸಂಸ್ಥೆಗಳ ಪಟ್ಟಿ ಈ ಕೆಳಗೆ ನೀಡಿದೆ**

| Sl. No. | Name & Address of the Institution/College | Project Theme |
|---|---|---|
| 1 | The National Institute of Engineering, Manandavadi Road, Mysore-570 008. | Nano material for photovoltaic energy conversion devices |
| 2 | Centre for wildlife Studies, No.1669, 31st Cross. 16th Main Banashankari 2nd Stage, B.lore-70. | (Conservation Biology) Meta-population Dynamics of tigers in malnad-Mysore tiger landscape (MMTL) of Karnataka |
| 3 | Amruta Institute of Engineering (Alems) Bidadi Industrial Area, Of Mysore Road, Near Toyota Motors, Bengaluru-562109. | Center of Excellence in software testing & test Automation |
| 4 | Mangalore University, Mangala Gangotri, Mangalore-574199. | Center for studies of Endemic and RET Species-Conservation and Bioprospecting |
| 5 | Bangalore University, Central College Campus, Bangalore-01. | Synthesis, structural & Mechanistic studies of some Industrially and Medicinally important compounds. |

ಉಪ ಸಮಿತಿಯ ಶಿಫಾರಸ್ಸಿನಂತೆ 2010–11ನೇ ಸಾಲಿನಲ್ಲಿ ವಿಜ್ಞಾನ ಇಂಜಿನಿಯರಿಂಗ್ ಮತ್ತು ವೈದ್ಯಕೀಯ ಶ್ರೇಷ್ಠ ಕೇಂದ್ರಗಳ ಸ್ಥಾಪಿಸುವ ಯೋಜನೆ ಅನುಷ್ಠಾನದ ಸಲುವಾಗಿ ಮೇಲಿನ ಐದು (5) ಪ್ರಸ್ತಾವನೆಗಳನ್ನು ಹಾಗೂ 2009–10ನೇ ಸಾಲಿನಲ್ಲಿ ಸ್ಥಾಪಿಸಲಾದ 5 ಕೇಂದ್ರಗಳಿಗೆ 2010–11ನೇ ಸಾಲಿಗೆ ಎರಡನೇ ಕಂತಿನ ಅನುದಾನವನ್ನು ಹಂಚಿಕೆ ಮಾಡಲು ಅನುಮೋದಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಿಯಇ 170 ವಿತ್ರಮ 2010, ಬೆಂಗಳೂರು, ದಿನಾಂಕ: 19ನೇ ಏಪ್ರಿಲ್, 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಯೋಜನೆಯಡಿ 2010–11ನೇ ಸಾಲಿನಲ್ಲಿ ಅನುಬಂಧ 'ಅ'ರಲ್ಲಿ ವಿವರಿಸಿರುವ ಐದು (5) ವಿಜ್ಞಾನ ಇಂಜಿನಿಯರಿಂಗ್ ಮತ್ತು ವೈದ್ಯಕೀಯ ಶ್ರೇಷ್ಠ ಕೇಂದ್ರಗಳನ್ನು ಸ್ಥಾಪಿಸುವ

(Establishment of Centres of Excellence in Science Engineering and Medicine (CESEM) ಯೋಜನೆಯ ಅನುಷ್ಠಾನದ ಸಲುವಾಗಿ ಮೊದಲನೇ ಕಂತಾಗಿ ರೂ.20.00 ಲಕ್ಷಗಳಂತೆ ಒಟ್ಟು 100.00 ಲಕ್ಷಗಳನ್ನು ಹಾಗೂ 2009–10ನೇ ಸಾಲಿನಲ್ಲಿ ಸ್ಥಾಪಿಸಲಾದ 5 ಕೇಂದ್ರಗಳಿಗೆ ಅನುಬಂಧ 'ಆ'ರಲ್ಲಿ ವಿವರಿಸಿದಂತೆ ಎರಡನೇ ಕಂತಾಗಿ ತಲಾ ರೂ. 20.00 ಲಕ್ಷಗಳಂತೆ ಒಟ್ಟು 100.00 ಲಕ್ಷಗಳನ್ನು ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹವು ಒಟ್ಟು ರೂ. 200.00 ಲಕ್ಷಗಳನ್ನು ಹಂಚಿಕೆ ಮಾಡಲು ಈ ಕೆಳಕಂಡ ನಿಬಂಧನೆ ಮೇರೆಗೆ ಸರ್ಕಾರದ ಅನುಮೋದನೆ ನೀಡಲಾಗಿದೆ.

1) ಈ ಯೋಜನೆಯ ಅನುಷ್ಠಾನದ ಸಲುವಾಗಿ ಬಿಡುಗಡೆ ಮಾಡುವ ಹಣವು ಸದ್ಬಳಕೆಯಾಗದಿದ್ದರೆ ಹಾಗೂ ಯೋಜನೆ ಅನುಷ್ಠಾನವನ್ನು ಮಧ್ಯದಲ್ಲಿ ರದ್ದುಪಡಿಸಿದರೆ ಸರ್ಕಾರದಿಂದ ನೀಡಲಾದ ಆರ್ಥಿಕ ಸೌಲಭ್ಯವನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಕರಾರಿನಲ್ಲಿ ಸೂಕ್ತ ನಿಬಂಧನೆಗಳನ್ನು ಶಿಕ್ಷಣ ಸಂಸ್ಥೆಗಳಿಗೆ ವಿಧಿಸತಕ್ಕದ್ದು; ಹಾಗೂ ಯೋಜನೆಯನ್ನು ಶಿಕ್ಷಣ ಸಂಸ್ಥೆಗಳು ನಿರ್ವಹಿಸುವ ಬಗ್ಗೆ ಕಾಲ ಕಾಲಕ್ಕೆ ಮೌಲ್ಯಮಾಪನ ಕೈಗೊಳ್ಳಬೇಕು,
2) ಯೋಜನೆಯ ಅನುಷ್ಠಾನಕ್ಕೆ ಶಿಕ್ಷಣ ಸಂಸ್ಥೆಗಳು ಅನುದಾನವನ್ನು ಸದುಪಯೋಗ ಮಾಡಿಕೊಂಡಿದ್ದಕ್ಕೆ ಲೆಕ್ಕ ಪರಿಶೋಧಿತ ಉಪಯೋಗತಾ ಪ್ರಮಾಣ ಪತ್ರಗಳನ್ನು ನಿಗದಿತ ಕಾಲಮಿತಿಯಲ್ಲಿ ಪಡೆದು ಸರ್ಕಾರಕ್ಕೆ ಸಲ್ಲಿಸತಕ್ಕದ್ದು,
3) ಸರ್ಕಾರದಿಂದ ಯಾವ ಉದ್ದೇಶಕ್ಕಾಗಿ ಅನುದಾನ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದು,
4) 2009–10ನೇ ಸಾಲಿನಲ್ಲಿ ಸ್ಥಾಪಿಸಿರುವ 5 ವಿಜ್ಞಾನ ಶಿಕ್ಷಣ ಕೇಂದ್ರಗಳಿಗೆ 2010–11ನೇ ಸಾಲಿನಲ್ಲಿ ಎರಡನೇ ಸುತ್ತಿನ ಅನುದಾನ ಬಿಡುಗಡೆ ಮಾಡುವ ಮುನ್ನ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಉಪ ಸಮಿತಿಯಿಂದ ಪ್ರಗತಿಯ ಮೌಲ್ಯಮಾಪನ ಕೈಗೊಂಡು ಸರ್ಕಾರಕ್ಕೆ ಸಲ್ಲಿಸತಕ್ಕದ್ದು,

ಈ ಆದೇಶವನ್ನು ಆರ್ಥಿಕ ಇಲಾಖೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ:16/05/2008ರ ಅಡಿಯಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಪ್ರದತ್ತವಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಬೋರಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ವಿಯಇ 170 ವಿತ್ರಮ 2010, ಬೆಂಗಳೂರು ದಿನಾಂಕ: 19–04–2011**

**ಅನುಬಂಧ – ಅ**

**2010–11ನೇ ಸಾಲಿನ ಆಯ್ಕೆ ಪಟ್ಟಿ (ಮೊದಲನೇ ಕಂತಾಗಿ)**

| Sl.No. | Name & address of the Institution/College | Project Theme |
|---|---|---|
| 1 | The National Institute of Engineering, Manandavadi Road, Mysore-570 008. | Nano material for photovoltaic energy conversion devices |
| 2 | Centre for wildlife Studies, No.1669, 31st Cross. 16th Main Banashankari 2nd Stage, B.lore-70. | (Conservation Biology) Meta-population Dynamics of tigers in malnad-Mysore tiger landscape (MMTL) of Karnataka |
| 3 | Amruta Institute of Engineering (Alems) Bidadi Industrial Area, Of Mysore Road, Near Toyota Motors, Bengaluru-562109. | Center of Excellence in software testing & test Automation |
| 4 | Mangalore University, Mangala Gangotri, Mangalore-574199. | Center for studies of Endemic and RET Species-Conservation and Bioprospecting |
| 5 | Bangalore University, Central College Campus, Bangalore-01. | Synthesis, structural & Mechanistic studies of some Industrially and Medicinally important compounds. |

**ಅನುಬಂಧ – ಆ**

**2009–10ನೇ ಸಾಲಿನ ಆಯ್ಕೆ ಪಟ್ಟಿ (ಎರಡನೇ ಕಂತಾಗಿ)**

| Sl.No. | Name of the PI, College Name and Address | Title of the Proposed Research |
|---|---|---|
| 1 | Dr. S. Badami<br>Sree Siddaganga College of Pharmacy, BM Road, Tumkur-572 102 | Centre of Excellence in Herbal Drug Development |
| 2 | Dr. Pramod B. Ghai<br>Department of Applied Genetics, Karnatak University, Pavate Nagar, Dharwad-580 003 | Center of Excellence in Molecular Hemato-Oncology |

| | | |
|---|---|---|
| 3 | Dr. M.L. Satyanarayana<br>Professor & Head Department of Pathology, Veterinary College, Hebbal, Bangalore-24 | Establishment of Modern Histo Pathology Laboratory & Centre of Excellence in Pathology |
| 4 | Dr. B.N. Keshavan<br>Professor & Head Dept. of Electrical & Electronics Engineering, PES Institute of Technology, 100ft Ring Road, BSK 3rd Stage, Bangalore-560 085 | Centre of Excellence in High Voltage and Power Systems |
| 5 | Dr. K.V.S. Ananda Babu<br>CMR Institute of Technology, # 132, AECS Layout, ITPL Road, Kundalahalli, Bangalore-560 037 | Quality Enhancement of Audio and Video Signals |

**ಕೆ. ಬೋರಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. 1210

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:** ರಾಜ್ಯದ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಶಿಕ್ಷಣ ಮತ್ತು ಸಂಶೋಧನೆಯ ಮೂಲ ಸೌಕರ್ಯಗಳನ್ನು ಒದಗಿಸುವ ಕೆ-ಫಿಸ್ಟ್ ಯೋಜನೆಯನ್ನು ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ವಿಯಇ 50 ವಿತ್ರಮ 2010, ದಿನಾಂಕ: 13/04/2010.
2) ಸರ್ಕಾರದ ಆದೇಶ ಸಂಖ್ಯೆ: ವಿಯಇ 33 ವಿತ್ರಮ 2009, ದಿನಾಂಕ: 21/05/2010.
3) ಸರ್ಕಾರದ ಆದೇಶ ಸಂಖ್ಯೆ: ವಿಯಇ 35 ವಿತ್ರಮ 2010, ದಿನಾಂಕ: 12/10/2010 ಮತ್ತು ದಿನಾಂಕ: 10.02.2011.
4) ಕಾರ್ಯನಿರ್ವಾಹಕ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ ಇವರ ಪತ್ರ ಸಂಖ್ಯೆ: VGST/P-15/K-Fist/2010-11/629, ದಿ: 24.02.2011.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ, ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳನ್ನು ಮುಂದುವರೆಸಿ 2010-11ನೇ ಸಾಲಿಗೆ ಅನುಷ್ಠಾನಗೊಳಿಸಲು ಆದೇಶ ಹೊರಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ 2010-11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 3425-60-600-0-02 (059) (ಯೋ) ಇದರಡಿಯಲ್ಲಿ ಒಟ್ಟು ರೂ.10.00 ಕೋಟಿಗಳ ಅನುದಾನವನ್ನು ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಯೋಜನೆಗಳಿಗಾಗಿ ಕಲ್ಪಿಸಲಾಗಿದ್ದು, ಇದರ ಅನುಷ್ಠಾನಕ್ಕಾಗಿ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಲಾಗಿದೆ.

ಮೇಲೆ (3)ರಲ್ಲಿ ಓದಲಾದ ಆದೇಶಗಳಲ್ಲಿ 2010-11ನೇ ರಾಜ್ಯದ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಶಿಕ್ಷಣ ಮತ್ತು ಸಂಶೋಧನೆಯ ಮೂಲ ಸೌಕರ್ಯಗಳನ್ನು ಒದಗಿಸುವ ಕೆ-ಫಿಸ್ಟ್ ಯೋಜನೆಯ ಅನುಷ್ಠಾನಕ್ಕಾಗಿ ರೂ.500.00 ಲಕ್ಷಗಳ ಸಹಾಯಾನುದಾನವನ್ನು ಬಿಡುಗಡೆ ಮಾಡಿದೆ.

ಮೇಲೆ (4)ರಲ್ಲಿ ಓದಲಾದ ಕಾರ್ಯನಿರ್ವಾಹಕ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ, ಬೆಂಗಳೂರು. ಇವರ ಪತ್ರದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಮಾರ್ಗಸೂಚಿಯನ್ವಯ ರಾಜ್ಯದ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಶಿಕ್ಷಣ ಮತ್ತು ಸಂಶೋಧನೆಯ ಮೂಲ ಸೌಕರ್ಯಗಳನ್ನು ಒದಗಿಸುವ ಕೆ-ಫಿಸ್ಟ್ ಯೋಜನೆಯ ಅನುಷ್ಠಾನದ ಸಲುವಾಗಿ ಅರ್ಜಿಗಳನ್ನು ಆಹ್ವಾನಿಸಿದ್ದು, ನಿಗದಿಪಡಿಸಿದ ಕೊನೆಯ ದಿನಾಂಕ:30/11/2010 ರೊಳಗೆ 167 ಅರ್ಜಿಗಳನ್ನು ಸ್ವೀಕರಿಸಲಾಗಿದ್ದು, ಸದರಿ ಅರ್ಜಿಗಳನ್ನು ದಿನಾಂಕ: 27-01-2011ರಂದು ಉಪ ಸಮಿತಿಯು ಮಾರ್ಗಸೂಚಿಯನ್ವಯ ಅರ್ಜಿಗಳನ್ನು ಪರಿಶೀಲಿಸಿ, ಆಯ್ಕೆಯಾದ 40 ಅರ್ಜಿಗಳಲ್ಲಿ ವರ್ಗ-1 ರಡಿಯಲ್ಲಿ 30 ಉನ್ನತ ಶಿಕ್ಷಣ ಸಂಸ್ಥೆಗಳಿಗೆ ಮೊದಲ ಕಂತಾಗಿ ತಲಾ ರೂ. 10.00 ಲಕ್ಷಗಳನ್ನು ಹಾಗೂ ವರ್ಗ-2ರಡಿಯಲ್ಲಿ 10 ಉನ್ನತ ಶಿಕ್ಷಣ ಸಂಸ್ಥೆಗಳಿಗೆ ಮೊದಲನೆ ಕಂತಾಗಿ ತಲಾ ರೂ.20.00 ಲಕ್ಷಗಳಂತೆ ಒಟ್ಟು 40 ಅರ್ಹ ಉನ್ನತ ಶಿಕ್ಷಣ ಸಂಸ್ಥೆಗಳನ್ನು 2010-11ನೇ ಸಾಲಿಗೆ ಅನುದಾನವನ್ನು ಒದಗಿಸಲು ಆಯ್ಕೆಗೊಳಿಸಿ, ಶಿಫಾರಸ್ಸು ಮಾಡಿದ್ದು, ಆಯಾಯ ಸಂಸ್ಥೆಗಳಿಗೆ ಉಪ-ಸಮಿತಿಯು ನಿಗದಿಪಡಿಸಿರುವ ಅನುದಾನವನ್ನು ಹಂಚಿಕೆ ಮಾಡಲು ಸರ್ಕಾರದಿಂದ ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಉಪ-ಸಮಿತಿಯ ಶಿಫಾರಸ್ಸಿನಂತೆ 2010-11ನೇ ಸಾಲಿನಲ್ಲಿ ಕೆ-ಫಿಸ್ಟ್ ಯೋಜನೆಯ ಅನುಷ್ಠಾನದ ಸಲುವಾಗಿ ವರ್ಗ-1 ರಡಿಯಲ್ಲಿ 30 ಪ್ರಸ್ತಾವನೆಗಳನ್ನು ಹಾಗೂ ವರ್ಗ-2ರಡಿಯಲ್ಲಿ 10 ಪ್ರಸ್ತಾವನೆಗಳನ್ನು ಸೇರಿದಂತೆ ಒಟ್ಟಾರೆ 40 ಅರ್ಹ ಉನ್ನತ ಶಿಕ್ಷಣ ಸಂಸ್ಥೆಗಳ ಪ್ರಸ್ತಾವನೆಗಳನ್ನು ಅನುಮೋದಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಅದೇಶ ಸಂಖ್ಯೆ: ವಿಯಇ 35 ವಿತ್ರಮ 2010, ಬೆಂಗಳೂರು, ದಿನಾಂಕ: 19ನೇ ಏಪ್ರಿಲ್, 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಯೋಜನೆಯಡಿ 2010-11ನೇ ಸಾಲಿನಲ್ಲಿ ಅನುಬಂಧ "ಅ"ರಲ್ಲಿ ವಿವರಿಸಿದಂತೆ ವರ್ಗ-1 ರಡಿಯಲ್ಲಿ ಆಯ್ಕೆಯಾದ 30 ಶಿಕ್ಷಣ ಸಂಸ್ಥೆಗಳಿಗೆ ಮೊದಲನೇ ಕಂತಾಗಿ ತಲಾ ರೂ.10.00 ಲಕ್ಷಗಳಂತೆ ಹಾಗೂ ಅನುಬಂಧ 'ಆ'ರಲ್ಲಿ ವಿವರಿಸಿದಂತೆ ವರ್ಗ-2 ರಡಿಯಲ್ಲಿ ಆಯ್ಕೆಯಾದ 10 ಶಿಕ್ಷಣ ಸಂಸ್ಥೆಗಳಿಗೆ ಮೊದಲನೇ ಕಂತಾಗಿ ತಲಾ

ರೂ. 20.00 ಲಕ್ಷಗಳನ್ನು 2010–11ನೇ ಸಾಲಿನ ಕೆ–ಫಿಸ್ಟ್ ಯೋಜನೆಯ ಅನುಷ್ಠಾನಕ್ಕಾಗಿ ಅನುದಾನವನ್ನು ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹವು ಆಯಾಯ ಸಂಸ್ಥೆಗಳಿಗೆ ಹಂಚಿಕೆ ಮಾಡಲು ಈ ಕೆಳಕಂಡ ನಿಬಂಧನೆ ಮೇರೆಗೆ ಸರ್ಕಾರದ ಅನುಮೋದನೆ ನೀಡಲಾಗಿದೆ.

1) ಈ ಯೋಜನೆಯ ಅನುಷ್ಠಾನದ ಸಲುವಾಗಿ ಬಿಡುಗಡೆ ಮಾಡುವ ಹಣದ ಸದ್ಬಳಕೆಗೆ ನಿಗಾವಹಿಸಲು ಹಣವನ್ನು ದುರುಪಯೋಗವಾಗದಂತೆ ಹಾಗೂ ಯೋಜನೆ ಅನುಷ್ಠಾನವನ್ನು ಮಧ್ಯದಲ್ಲಿ ರದ್ದುಪಡಿಸಿದರೆ ಸರ್ಕಾರದಿಂದ ನೀಡಲಾದ ಆರ್ಥಿಕ ಸೌಲಭ್ಯವನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಕರಾರಿನಲ್ಲಿ ಸೂಕ್ತ ನಿಬಂಧನೆಗಳನ್ನು ಶಿಕ್ಷಣ ಸಂಸ್ಥೆಗಳಿಗೆ ವಿಧಿಸತಕ್ಕದ್ದು; ಹಾಗೂ ಯೋಜನೆಯನ್ನು ಶಿಕ್ಷಣ ಸಂಸ್ಥೆಗಳು ನಿರ್ವಹಿಸುವ ಬಗ್ಗೆ ಕಾಲ ಕಾಲಕ್ಕೆ ಮೌಲ್ಯಮಾಪನ ಕೈಗೊಳ್ಳಬೇಕು,
2) ಯೋಜನೆಯ ಅನುಷ್ಠಾನಕ್ಕೆ ಶಿಕ್ಷಣ ಸಂಸ್ಥೆಗಳು ಅನುದಾನವನ್ನು ಸದುಪಯೋಗ ಮಾಡಿಕೊಂಡಿದ್ದಕ್ಕೆ ಲೆಕ್ಕ ಪರಿಶೋಧಿತ ಉಪಯೋಗತಾ ಪ್ರಮಾಣ ಪತ್ರಗಳನ್ನು ನಿಗದಿತ ಕಾಲಮಿತಿಯಲ್ಲಿ ಪಡೆದು ಸರ್ಕಾರಕ್ಕೆ ಸಲ್ಲಿಸತಕ್ಕದ್ದು,
3) ಸರ್ಕಾರದಿಂದ ಯಾವ ಉದ್ದೇಶಕ್ಕಾಗಿ ಅನುದಾನ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದು,

ಈ ಆದೇಶವನ್ನು ಆರ್ಥಿಕ ಇಲಾಖೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ:16/05/2008ರ ಅಡಿಯಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಪ್ರದತ್ತವಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಬೋರಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ವಿಯಇ 35 ವಿತ್ರಮ 2010, ಬೆಂಗಳೂರು ದಿನಾಂಕ: 19–04–2011.**

**ಅನುಬಂಧ – ಅ**

**K-FIST CATEGORY LEVEL-I**

| Sl.No. | Name & address of the college | Name of the department |
|---|---|---|
| 1 | Kuvempu University, Jnana Shayadri, Shankaraghatta, Bhadravathi, Shimoga-577451 | PG Department of Zoology |
| 2 | University College of Science, Tumkur University, B.H. Road, Tumkur-572103 | Department of Microbiology |
| 3 | Government Science College, Chitradurga-577 501 | Department of Botany |
| 4 | Maharani's Science College of Women, JLB Road, Mysore-570 005 | PG Dept. of Microbiology |
| 5 | Government Science College, Hassan-573 201 | Dept. of PG Studies in Chemistry |
| 6 | Government Arts & Science College, Karwar-581 301, Uttar Kannada | Dept. of Chemistry |
| 7 | I.D.S.G. Government College, Chikmagalur-577 102 | Dept. of Chemistry |
| 8 | Sir M.V. Government Science College, Bommanakatte, Bhadravathi-577 302 | Dept. of Industrial Chemistry |
| 9 | Oxford College of Science, No. 32, 19th Main, 17th B Cross, Sector-4, HSR Lay Out, Bangalore-560 102 | Dept. of Biochemistry, |
| 10 | University BDT College of Engineering, Davangere-577 004 | Dept. of Studies in Computer Science & Engineering |
| 11 | Mangalore University, Mangalagangotri, Mangalore-574 199 | Dept. of Material Science |
| 12 | Davanagere University, Shivagangotri, Davanagere-577 002 | Dept. of Studies in Food Technology |
| 13 | Bangalore University, Jnanabharathi, Bangalore-560 056 | Dept. of Electronic Science |
| 14 | College of Rural Home Science, University of Agricultural Sciences, Dharwad-580 005 | Dept. of Family Resource Management |
| 15 | Gulbarga University, Gulbarga-585 106 | Dept. of Statistics |
| 16 | Gogte Institute of Technology, Udyam Bag, Belgaum-590 008 | Dept. of Industrial & Production Engg. |
| 17 | Siddaganga Institute of Technology, B.H. Road, Tumkur-572 103 | Dept. of Mechanical Engineering |
| 18 | PES College of Engineering, Mandya-571 401 | Dept. of E & C Engineering |

| Sl.No. | Name & address of the college | Name of the department |
|---|---|---|
| 19 | Dr. Ambedkar Institute of Technology, Near Jnana Bharathi Campus, BDA Outer Ring Road, Bangalore-560 056 | Dept. of Electrical & Electronics |
| 20 | D.G. Melmalagi Ayurvedic Medical College & Hospital, Post Graduate Studies & Research Center, Dr. S.V. Savadi Road, Gadag-582 103 | Dept. of Panchakarma |
| 21 | JN Medical College, KLE University, Belgaum-590 010 | Dept. of Microbiology |
| 22 | KVG Medical College & Hospital, Kurunjibag, Sullia-574 327 | Dept. of Microbiology |
| 23 | JSS College of Arts, Commerce & Science, Ooty Road, Mysore-570 025 | P.G Dept. of Biotechnology |
| 24 | Dr. A.V. Baliga College of Arts & Science, Kumta-581 343, Uttar Kannada. | Dept. of Chemistry |
| 25 | S.B. Arts & K.C.P. Science College, B.L.D.E. Association, Sholapur Road, Bijapur-586 103 | Dept. of Chemistry |
| 26 | Visveswarapura College of Science, K. R. Road, V. V. Pura, Bangalore-560 004 | Dept. of Biotechnology |
| 27 | Vijayanagar College, Hospet-583 201, Bellary | Dept. of Physics |
| 28 | B.M.S. College of Engineering, P.B. No.1908, Bull Temple Road, Bangalore-560 019. | Dept. of Electronics & Communication |
| 29 | L.V.D. College, Manik Prabhu Temple Road, Raichur-584 103 | PG Dept. of Studies in Physics |
| 30 | BGS Institute of Technology, BG Nagar, Nagamangala-571 448, Mandya. | Dept. of Electronics & Communication Engineering |

**ಕೆ. ಬೋರಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ವಿಯಇ 35 ವಿತ್ರಮ 2010, ಬೆಂಗಳೂರು ದಿನಾಂಕ: 19–04–2011.**

**ಅನುಬಂಧ – ಆ**

**K-FIST CATEGORY LEVEL-II**

| Sl.No. | Name & Address of the College | Name of the Department |
|---|---|---|
| 1 | College of Agriculture, University of Agricultural Sciences, Krishinagar, Yettinagudda Campus, Dharwad-580 005. | Dept. of Crop Physiology |
| 2 | University of Mysore, Manasgangotri, Mysore-570006. | Dept. of Studies in Biochemistry |
| 3 | Tumkur University, Vishwavidyanilaya Karyalaya, University Constituent College Campus, B.H. Road, Tumkur-572103. | PG Studies in Biochemistry |
| 4 | Davanagere University, Shivagangotri, Davanagere-577002. | Dept. of Studies in Biochemistry |
| 5 | Gulbarga University, Jnana Ganga, Gulbarga-585106. | Dept. of Materials Science |
| 6 | Al-Ameen College of Pharmacy, Hosur Road, Opp. to Lalbagh Main Gate, Bangalore-560 027 | Dept. Of Pharmaceutics |
| 7 | Manipal University, Manipal-576104. | Dept. of Molecular Biology and Human Genetics |
| 8 | Basaveshwar Engineering College, GRBC Post, Vidyagiri, Bagalkot-587 102 | Dept. of Electrical & Electronics |
| 9 | St. Joseph's College P.O. Box 27094, 36, Lalbagh Road, Bangalore-560027. | Dept. of Microbiology |
| 10 | Mahajana Education Society, Pooja Bhagavat Memorial Mahajana Post Graduate Centre of SBRR Mahajana First Grade College, K.R.S. Road, Metagalli, Mysore-570016. | Dept. of Studies in Biotechnology & Microbiology |

**ಕೆ. ಬೋರಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. 1211

## ಕಂದಾಯ ಸಚಿವಾಲಯ

**ವಿಷಯ:** ಶಿವಮೊಗ್ಗ ನಗರದಲ್ಲಿರುವ ಶ್ರೀ ತಿರುಪಾಳಯ್ಯ ಛತ್ರ ಹಾಗೂ ಇದಕ್ಕೆ ಸೇರಿದ ಶ್ರೀ ವೀರಾಂಜನೇಯಸ್ವಾಮಿ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸಿ ಪ್ರಕಟಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ಸಂಖ್ಯೆ: ಎಡಿಎಂ 5 ಸಿಆರ್ 42/2010–11 ದಿನಾಂಕ: 03.03.2011

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ದಿನಾಂಕ: 03.03.2011 ರಲ್ಲಿ ಶಿವಮೊಗ್ಗ ನಗರದ ಶ್ರೀ ತಿರುಪಾಳಯ್ಯ ಛತ್ರ ಮತ್ತು ಇದಕ್ಕೆ ಸೇರಿದ ಶ್ರೀ ವೀರಾಂಜನೇಯಸ್ವಾಮಿ ದೇವಸ್ಥಾನವು ಮೈಸೂರು ಧಾರ್ಮಿಕ ಮತ್ತು ಧರ್ಮಾದಾಯ ದತ್ತಿಗಳ ಕಾಯ್ದೆ 1927ರ ವ್ಯಾಪ್ತಿಗೆ ಒಳಪಟ್ಟಿದ್ದು, ಸದರಿ ಸಂಸ್ಥೆಗೆ ಸರ್ಕಾರವು ದಿನಾಂಕ: 31.10.2001ರ ಆದೇಶದಲ್ಲಿ ಶ್ರೀ ಎಸ್.ಆರ್. ಕೃಷ್ಣಪ್ಪ ಎಂಬುವವರನ್ನು ಏಕೈಕ ಧರ್ಮದರ್ಶಿಯಾಗಿ ನೇಮಕಾತಿ ಮಾಡಲಾಗಿತ್ತು. ಅವರ ಮರಣ ನಂತರ ಶ್ರೀ ರಾಕೇಶ ಕುಮಾರ್ ಅವರನ್ನು ಸದರಿ ಸಂಸ್ಥೆಗೆ ಏಕೈಕ ಧರ್ಮದರ್ಶಿಯನ್ನಾಗಿ ನೇಮಿಸುವಂತೆ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆರವರು ಕೋರಿರುತ್ತಾರೆ. ಆದರೆ, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಕಾಯ್ದೆ 1997 ಜಾರಿಗೆ ಬಂದ ನಂತರದಲ್ಲಿ ಈ ಸಂಸ್ಥೆಯನ್ನು ಅಧಿಸೂಚಿತ ಸಂಸ್ಥೆಗಳನ್ನಾಗಿ ಪ್ರಕಟಿಸಿರುವುದಿಲ್ಲವಾದ್ದರಿಂದ ಸದರಿ ಸಂಸ್ಥೆಯನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಗೆ ಸೇರಿಸುವಂತೆ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆರವರು ಶಿಫಾರಸ್ಸು ಮಾಡಿರುತ್ತಾರೆ.

ಜಿಲ್ಲಾಧಿಕಾರಿಗಳ ಕೋರಿಕೆಯಂತೆ ಶ್ರೀ ತಿರುಪಾಳಯ್ಯ ಛತ್ರ ಮತ್ತು ಇದಕ್ಕೆ ಸೇರಿದ ಶ್ರೀ ವೀರಾಂಜನೇಯಸ್ವಾಮಿ ದೇವಸ್ಥಾನವು ಹಿಂದಿನ ರದ್ದಾದ ಮೈಸೂರು ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಕಾಯ್ದೆ 1927 ರನ್ವಯ ನಿಯಂತ್ರಿಸಲ್ಪಡುತ್ತಿದ್ದುದರಿಂದ ಸದರಿ ಸಂಸ್ಥೆಯನ್ನು ಕಾಯ್ದೆಯ ಸೆಕ್ಷನ್ 23 ರನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸಿ ಪ್ರಕಟಣೆ ಹೊರಡಿಸುವಂತೆ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರು ಕೋರಿಕೆ ಸಲ್ಲಿಸಿರುತ್ತಾರೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 22 ಮುಅಬಿ 2011, ಬೆಂಗಳೂರು, ದಿನಾಂಕ: 27ನೇ ಏಪ್ರಿಲ್, 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶಿವಮೊಗ್ಗ ನಗರದ ಶ್ರೀ ತಿರುಪಾಳಯ್ಯ ಛತ್ರ ಮತ್ತು ಇದಕ್ಕೆ ಸೇರಿದ ಶ್ರೀ ವೀರಾಂಜನೇಯಸ್ವಾಮಿ ದೇವಸ್ಥಾನವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿ ಕಾಯ್ದೆ 1997ರ ಸೆಕ್ಷನ್ 23 ರನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಗೆ ಸೇರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1212

**ಜಿ. ರಾಮಚಂದ್ರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** ವಾಣಿವಿಲಾಸ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ ಮತ್ತು ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತಗಳು ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನಿಂದ ರಾಜ್ಯ ಸರ್ಕಾರದ ಖಾತರಿ ಮೇಲೆ ಪಡೆದಿರುವ ಸಾಲವನ್ನು ಬ್ಯಾಂಕಿಗೆ ಮರುಪಾವತಿಸಿರುವುದಕ್ಕೆ ಲೆಕ್ಕ ಹೊಂದಾಣಿಕೆ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** ಸಂಖ್ಯೆ ವಾಕೈ 94 ಸಸಕಾ 2008 ದಿನಾಂಕ: 24–03–2011ರ ಸರ್ಕಾರದ ಆದೇಶ.

**ಪ್ರಸ್ತಾವನೆ:**

ವಾಣಿವಿಲಾಸ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ ಮತ್ತು ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಈ ಸಂಘಗಳು ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನಿಂದ ಸರ್ಕಾರದ ಖಾತರಿ ಮೇಲೆ ಪಡೆದಿರುವ ಸಾಲಗಳನ್ನು ಮರುಪಾವತಿಸದೇ ಇರುವುದರಿಂದ ಮತ್ತು ಅಪೆಕ್ಸ್ ಬ್ಯಾಂಕ್ ಸರ್ಕಾರದ ಖಾತರಿಯನ್ನು ಇನ್‌ವೋಕ್ ಮಾಡಿರುವುದರಿಂದ, ಈ ಮೂರು ಕಾರ್ಖಾನೆಗಳು ದಿನಾಂಕ 31–1–2011ರ ಅಂತ್ಯಕ್ಕೆ ಬ್ಯಾಂಕಿಗೆ ಪಾವತಿಸಲು ಬಾಕಿಯಿರುವ ಅಸಲು ಮತ್ತು ಬಡ್ಡಿಯನ್ನು ಅಪೆಕ್ಸ್ ಬ್ಯಾಂಕಿಗೆ ಪಾವತಿಸುವ ಸಲುವಾಗಿ ಒಟ್ಟು ರೂ. 2483.44 ಲಕ್ಷಗಳನ್ನು 2010–2011ನೇ ಸಾಲಿನ ಪೂರಕ ಅಂದಾಜುಗಳು–III ರಲ್ಲಿ ಈ ಕೆಳಕಂಡಂತೆ ತಿಳಿಸಿರುವ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಒದಗಿಸಿದ್ದು ಈ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ನಿಯಮಿತಕ್ಕೆ ಪಾವತಿಸಲು ಮೇಲೆ ಓದಲಾದ (1) ರಲ್ಲಿ ಆದೇಶಿಸಲಾಗಿದೆ.

**(ರೂ.ಲಕ್ಷಗಳಲ್ಲಿ)**

| ಕ್ರ. ಸಂ. | ಕಾರ್ಖಾನೆ ಹೆಸರು | ಅಸಲು | ಬಡ್ಡಿ (ಶೇ.6.5 ರಂತೆ) | ಒಟ್ಟು | ಲೆಕ್ಕ ಶೀರ್ಷಿಕೆ |
|---|---|---|---|---|---|
| 1 | ವಾಣಿವಿಲಾಸ ಸಹಕಾರಿ ಸಕ್ಕರೆ ಕಾರ್ಖಾನೆ | 447.05 | 174.43 | 621.48 | 6860–04–101–0–03 |
| 2 | ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ | 904.01 | 323.59 | 1227.60 | 6425–00–108–5–07 |
| 3 | ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ | 523.59 | 110.77 | 634.36 | 6860–04–101–0–10 |
| | **ಒಟ್ಟು** | **1874.65** | **608.79** | **2483.44** | |

ಮೇಲ್ಕಂಡ ಮೊತ್ತಗಳನ್ನು ಕಾರ್ಖಾನೆಗಳ ಪರವಾಗಿ ಅಪೆಕ್ಸ್ ಬ್ಯಾಂಕಿಗೆ ಪಾವತಿಸಲು ಖರ್ಚನ್ನು ಮೊದಲಿಗೆ ವಿತ್ತೀಯ ನಿರ್ವಹಣಾ ನಿಧಿಯಿಂದ (Fiscal Management Fund) ಭರಿಸಲಾಗಿದ್ದು, ಅದರಂತೆ ಕೆಳಕಂಡಂತೆ ಲೆಕ್ಕ ಹೊಂದಾಣಿಕೆ ಆದೇಶವನ್ನು (Adjustment Order) ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 94 ಸಸಕಾ 2008, ಬೆಂಗಳೂರು, ದಿನಾಂಕ: 31ನೇ ಮಾರ್ಚ್, 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕ್ರಮಸಂಖ್ಯೆ: 1 ಮತ್ತು 3 ರಲ್ಲಿ ತಿಳಿಸಿರುವ ರೂ.1255.84 ಮೊತ್ತಗಳನ್ನು (ರೂಪಾಯಿ ಹನ್ನೆರಡು ಕೋಟಿ ಐವತ್ತೈದು ಲಕ್ಷ ಎಂಬತ್ನಾಲ್ಕು ಸಾವಿರ ಮಾತ್ರ) ಲೆಕ್ಕ ಶೀರ್ಷಿಕೆ **"6860–04–902–0–00–ವಿತ್ತೀಯ ನಿರ್ವಹಣಾ ನಿಧಿಯಿಂದ ಭರಿಸಲ್ಪಟ್ಟ ವಜಾ"** ಅಡಿಯಲ್ಲಿ ವ್ಯಯ ನಮೂದು ಎಂದು ಪರಿಗಣಿಸುವುದು ಮತ್ತು ಕ್ರಮಸಂಖ್ಯೆ: 2 ರಲ್ಲಿ ತಿಳಿಸಿರುವ ರೂ.1227.60 ಮೊತ್ತವನ್ನು (ರೂಪಾಯಿ ಹನ್ನೆರಡು ಕೋಟಿ ಇಪ್ಪತ್ತೇಳು ಲಕ್ಷ ಅರವತ್ತು ಸಾವಿರ ಮಾತ್ರ) ಲೆಕ್ಕ ಶೀರ್ಷಿಕೆ **"6425–00–902–0–00–ವಿತ್ತೀಯ ನಿರ್ವಹಣಾ ನಿಧಿಯಿಂದ ಭರಿಸಲ್ಪಟ್ಟ ವಜಾ"** ಅಡಿಯಲ್ಲಿ ವ್ಯಯ ನಮೂದು ಎಂದು ಪರಿಗಣಿಸುವುದು. (The amount in respect of Sl.No.1 and 3 should be deducted under the Head of Account **"6860-04-902-0-00 Deduct amount met from Fiscal Management Fund"** and in respect of Sl.No.2, under the Head of Account **"6425-00-902-0-00 Deduct amount met from Fiscal Management Fund"**). ಈ ಸಾಲಿನ ಲೆಕ್ಕಗಳನ್ನು ಮುಕ್ತಾಯಗೊಳಿಸುವ ಮುನ್ನ ಪ್ರಧಾನ ಮಹಾಲೇಖಪಾಲರು (ಎ ಮತ್ತು ಇ) ತಮ್ಮ ಪುಸ್ತಕಗಳಲ್ಲಿ ಮೇಲ್ಕಂಡಂತೆ ಸೂಕ್ತ ಹೊಂದಾಣಿಕೆಗಳನ್ನು ಮಾಡಿಕೊಳ್ಳುವುದು.

ಈ ಆದೇಶವನ್ನು ದಿನಾಂಕ 5–2–2011ರ ಎಫ್‌ಡಿ 476 ವೆಚ್ಚ–2/2010ರ ಅನಧಿಕೃತ ಟಿಪ್ಪಣಿ ಮತ್ತು ದಿನಾಂಕ: 24–03–2011ರ ಆಇ 476 ವೆಚ್ಚ–2/10ರಲ್ಲಿ ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಮೂಲಕ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ರಾಮಸ್ವಾಮಿ**

ಪಿ.ಆರ್. 1213

ಸರ್ಕಾರದ ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ
(ಸಹಕಾರಿ ಸಕ್ಕರೆ)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** ಬೆಂಗಳೂರು ಮತ್ತು ಮೈಸೂರು ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರ [GT&TC] ಗಳಲ್ಲಿ B.Tech ಪದವಿ ವಿಷಯಗಳನ್ನು ಪ್ರಾರಂಭಿಸಲು ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** ವ್ಯವಸ್ಥಾಪಕ ನಿರ್ದೇಶಕರು, ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರ, ಬೆಂಗಳೂರು ಇವರ ಪತ್ರ ಸಂಖ್ಯೆ: MD/GTTC/PS-C&I/BTech/Adm.App/2010–11, ದಿನಾಂಕ: 9–7–2010.

**ಪ್ರಸ್ತಾವನೆ:**

ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರ [GT&TC], ಬೆಂಗಳೂರು ಇವರು ದಿನಾಂಕ: 25–1–2007 ಮತ್ತು 7–12–2009 ರಂದು ನಡೆದ ಸಂಸ್ಥೆಯ ಆಡಳಿತ ಮಂಡಳಿಯ ಸಭೆಯಲ್ಲಿ, ಬೆಂಗಳೂರು, ಮೈಸೂರು, ಹುಬ್ಬಳ್ಳಿ ಮತ್ತು ಬೆಳಗಾಂ ನಲ್ಲಿ B.Tech ತರಗತಿಗಳನ್ನು ಪ್ರಾರಂಭಿಸಲು ಅನುಮೋದನೆ ನೀಡಲಾಗಿದೆ. ಬೆಂಗಳೂರು ಮತ್ತು ಮೈಸೂರು ಕೇಂದ್ರಗಳಲ್ಲಿ ಮೊದಲ ಹಂತದಲ್ಲಿ 4 ವರ್ಷಗಳ B.Tech ಪದವಿಯನ್ನು ಎರಡು ವಿಭಾಗಗಳಲ್ಲಿ ಅಂದರೆ B.Tech in Tool Engineering ಮತ್ತು B.Tech in Precision Manufacturingನ್ನು ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ [VTU] ಮತ್ತು AICTEಯ affiliationನೊಂದಿಗೆ ಪ್ರಾರಂಭಿಸಲು ಅನುಮೋದನೆ ಕೋರಿದ್ದು, AICTE ಯು ಬೆಂಗಳೂರು ಕೇಂದ್ರದಲ್ಲಿ ಹಾಲಿ ಇರುವ M.Tech Course in Tool Engineering ನೊಂದಿಗೆ B.Tech in Tool Engineering ಮತ್ತು B.Tech in Precision Manufacturing ವಿಷಯಗಳನ್ನು ಪ್ರಾರಂಭಿಸಲು ಅನುಮೋದನೆ ನೀಡಿದೆ ಹಾಗೂ ಮೈಸೂರು ಕೇಂದ್ರಕ್ಕೆ ಅನುಮೋದನೆ ನಿರೀಕ್ಷಿಸಲಾಗಿದೆ. ಉನ್ನತ ಶಿಕ್ಷಣ ಇಲಾಖೆಯನ್ನು Seat matrix allotmentಗಾಗಿ ಕೋರಲಾಗಿದೆ ಎಂದು ತಿಳಿಸುತ್ತಾ, ಸದರಿ ವಿಷಯಗಳಲ್ಲಿ ತರಬೇತಿಗಳನ್ನು ನಡೆಸಲು ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಬೇಕೆಂದು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 31 ಎಸ್‌ಜಿಟಿ 2010, ಬೆಂಗಳೂರು, ದಿನಾಂಕ: 23ನೇ ಜುಲೈ, 2010**

**ಯೂನಿಕ್ ಕ್ರಮ ಸಂಖ್ಯೆ: 64/2010**

ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರದ [GT&TC] ಬೆಂಗಳೂರು ಮತ್ತು ಮೈಸೂರಿನ ಕೇಂದ್ರಗಳಲ್ಲಿ ಈ ಕೆಳಕಂಡಂತೆ B.Tech in Tool Engineering ಮತ್ತು B.Tech in Precision Manufacturing ಕೋರ್ಸ್‌ಗಳನ್ನು ಪ್ರಾರಂಭಿಸಲು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

| Sl. No. | Name of the Course | Level | Proposed Intake |
|---|---|---|---|
| 1 | B.Tech in Tool Engineering | Undergraduate | 60 students |
| 2 | B.Tech in Precision Manufacturing | Undergraduate | 60 students |

AICTE ಯ ಅನುಮೋದನೆ, ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯದಿಂದ affiliation ಮತ್ತು ಈ ಕೋರ್ಸ್‌ಗಳಿಗೆ ಶುಲ್ಕ ನಿಗದಿಪಡಿಸಲು ಉನ್ನತ ಶಿಕ್ಷಣ ಇಲಾಖೆಯ ಅನುಮೋದನೆಗಳನ್ನು ಪಡೆದ ನಂತರವೇ ಈ ಹೊಸ ಕೋರ್ಸ್‌ಗಳನ್ನು ಪ್ರಾರಂಭಿಸತಕ್ಕದ್ದು ಎಂಬ ಷರತ್ತುಗಳಿಗೊಳಪಡಿಸಿ ಈ ಆದೇಶವನ್ನು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಆರ್.ನಾಗಭೂಷಣ**

ಪೀಠಾಧಿಕಾರಿ [ಸಪ್ರಕೈ], ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. 1214

## COMMERCE & INDUSTRIES SECRETARIAT

**Subject:** Constitution of Committee to look into recommendations of Central Empowered Committee/and to identify the officers responsible for omissions and commissions in granting Mining Leases in Ramgad range.

**Read :** The interim report of Central Empowered Committee submitted to Hon'ble Supreme Court on 15.04.2011.

**PREAMBLE:**

The Samaja Parivarthana Samudaya and others have filed a Writ Petition No.562/2009 in Hon'ble Supreme Court with a prayer to direct the States and Union of India to stop all mining and other related activities in forest areas of Karnataka and Andhra Pradesh which are in violation of Forest (Conservation) Act, 1980 and with other prayers like nullifying the raising contract, stoppage of all mining along the border and in forest areas in the Bellary Reserved Forest, to initiate action against illegal mining and to take action against those named in the report of Hon'ble Lokayukta of Karnataka.

The Hon'ble Supreme Court in its interim order dated 25.02.2011 has directed the Central Empowered Committee to submit its report within 6 weeks with regard to the allegations/averments prayer contained in the Writ Petition No.562/2009.

The Central Empowered Committee after conducting meetings with State Government officers and after site visits has submitted an interim report on the illegal mining in Karnataka to Hon'ble Supreme Court on 15.04.2011. The Central Empowered Committee has recommended various measures with regard to mining leases granted illegally in Ramgad and Swamimalai forest blocks of Sandur taluk, Bellary District, illegal mining in forest areas, illegal mining/encroachments in BHS region by various mining lease holders, illegal mining by M/s.Lakshminarayana Mining Company and others, etc.

The Central Empowered Committee has made following recommendations in respect of mining leases, which are granted illegally in Ramgad and Swamimalai range in Sandur taluk, Bellary district and in respect of illegal mining in forest areas in mining lease No.2010:-

(i) Exemplary action against the concerned officers of the Forest department and Revenue department should be directed to be taken for issue of false "No Objection Certificates" stating that the areas wherein mining leases have been applied is a non-forest land;

(ii) Exemplary action against the concerned officers of the Mining Department should be directed to be taken in a time bound manner for processing and recommending the grant of mining leases in violation of the provisions of the MMRD Act and the Minerals Concession Rules and for concealing the material information and favouring individual persons;

(iii) The responsibility of allowing massive illegal mining in the forest area, even beyond the enjoyment found and provided in the Lokayukta, Karnataka Report, against the concerned officers of the State of Karnataka should be fixed in time-bound manner and exemplary punitive action should be taken against them in a time-bound manner.

Hence, it has become necessary to identify the officers who are responsible to issue "No Objection Certificates" stating the applied areas as being non-forest lands and the officers responsible for not properly processing and recommending for grant of mining lease and the officers responsible for allowing massive illegal mining in forest areas beyond the leased area, so that necessary action could be initiated against them, as per the recommendations of Central Empowered Committee.

Therefore, after examining all the issues, State Government has decided to constitute a Committee in this regard. Hence the following order.

**GOVERNMENT ORDER NO.CI.111:MMM.2011, BANGALORE, DATED:30th APRIL 2011.**

In the circumstances explained in the preamble, the Government is pleased to constitute a Committee under the Chairmanship of Principal Secretary to Government, Forest, Ecology and Environment Department, with immediate effect, with its

members as mentioned below to identify the officers who are responsible to issue wrong “No Objection Certificates” stating the applied areas as being non-forest lands and the officers responsible for not properly processing and recommending the cases for grant of mining lease and the officers responsible for allowing massive illegal mining in forest areas beyond the leased area to take further necessary action, as per the recommendations of Central Empowered Committee:-

**Members of the Committee**

i) Principal Secretary to Government, Forest, Ecology and Environment Department, - Chairman

ii) The Principal Secretary to Government, Commerce and Industries Department - Member

iii) The Principal Secretary to Government, Revenue Department. - Member

Department of Commerce & Industries shall be the nodal department to assist the above Committee. The Committee may call for any document/files for examination and any officer to elicit any information.

The Additional Principal Chief Conservator of Forest (Vigilance) and Director, Mines & Geology Department will assist the committee.

The committee may also take assistance of any officers in this regard, if feels necessary to do so.

The Committee shall submit its report/findings to the Government within a period of one week.

By order and in the name of the Governor of Karnataka,

P.R.1215

**M.V.SHIVASUBRAMANI**

Under Secretary to Government (Mines), Commerce & Industries Department.

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** One Time Additional Central Assistance ರಡಿ ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರ [GT&TC]ದ ಉಪ ಕೇಂದ್ರಗಳಿಗೆ ಮೂಲಭೂತ ಸೌಕರ್ಯಗಳನ್ನು ಉನ್ನತೀಕರಿಸುವುದಕ್ಕೆ ಅನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** [1] ವ್ಯವಸ್ಥಾಪಕ ನಿರ್ದೇಶಕರು, ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರ [GT&TC], ಬೆಂಗಳೂರು ಇವರ ಪತ್ರ ಸಂಖ್ಯೆ: MD/GTTC/TECSOK/ASC/2010-11, ದಿನಾಂಕ: 4-5-2010.

[2] ದಿನಾಂಕ: 29-6-2010 ರಂದು ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆ ನಡವಳಿ.

[3] ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: 44(1)PFI/2010-1349, ದಿನಾಂಕ: 10-3-2011.

**ಪ್ರಸ್ತಾವನೆ:**

ಓದಲಾದ [1]ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರ, ಬೆಂಗಳೂರು ಇವರು ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರದ 17 ಕೇಂದ್ರಗಳಲ್ಲಿನ ಮೂಲಭೂತ ಸೌಕರ್ಯಗಳನ್ನು ಉನ್ನತೀಕರಿಸಲು ಹಾಗೂ ಒಂದು ಹೊಸ ತರಬೇತಿ ಕೇಂದ್ರವನ್ನು ಪ್ರಾರಂಭಿಸಲು ಕೇಂದ್ರ ಸರ್ಕಾರದಿಂದ ರೂ. 83.25 ಕೋಟಿಗಳ One Time Grant ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ರಾಜ್ಯ ಸರ್ಕಾರವು ಭಾರತ ಸರ್ಕಾರದ ಯೋಜನಾ ಆಯೋಗಕ್ಕೆ ಶಿಫಾರಸ್ಸು ಮಾಡಲಾಯಿತು.

(Rs. in lakhs)

| Sl. No. | Centre | Machinery & Equipment | Civil Works | Total |
|---|---|---|---|---|
| 1 | Bangalore | 500 | | 500 |
| 2 | Mysore | 500 | | 500 |
| 3 | Mangalore | 350 | 600 | 950 |
| 4 | Gulbarga | 350 | | 350 |
| 5 | Belgaum | 400 | 150 | 550 |
| 6 | Dandeli | 300 | | 300 |
| 7 | Hubli | 400 | 680 | 1080 |
| 8 | Harihar | 350 | | 350 |
| 9 | Kudalasangama | 215 | | 215 |
| 10 | Maddur | 350 | | 350 |
| 11 | Kanakapura | 250 | 130 | 380 |
| 12 | Lingasugur | 350 | 110 | 460 |

| Sl. No. | Centre | Machinery & Equipment | Civil Works | Total |
|---|---|---|---|---|
| 13 | Gundlupet | 350 | | 350 |
| 14 | Kadur | 350 | | 350 |
| 15 | Humnabad | 350 | | 350 |
| 16 | Kolar | 300 | | 300 |
| 17 | Tumkur | 300 | | 300 |
| 18 | Shimoga (New proposed Centre) | 690 | | 690 |
| | **Total** | **6655** | **1670** | **8325** |

ಯೋಜನಾ ಆಯೋಗವು ಪ್ರಸ್ತಾವನೆಯನ್ನು ಪರಿಶೀಲಿಸಿ One Time Additional Central Assistance ಯೋಜನೆಯಡಿ ಜಿ.ಟಿ.ಟಿ.ಸಿ. ಯ 17 ತರಬೇತಿ ಕೇಂದ್ರಗಳ ಉನ್ನತೀಕರಣ ಹಾಗೂ ಶಿವಮೊಗ್ಗದಲ್ಲಿ ಒಂದು ಹೊಸ ತರಬೇತಿ ಕೇಂದ್ರದ ಸ್ಥಾಪನೆಗೆ ಒಟ್ಟು ಯೋಜನಾ ವೆಚ್ಚವನ್ನು ರೂ. 8325 ಲಕ್ಷ ಎಂದು ಅನುಮೋದಿಸಿ, ಯೋಜನಾ ವೆಚ್ಚದ ಶೇ. 30 ರಷ್ಟು ಮೊತ್ತವನ್ನು ಅಂದರೆ ರೂ. 2497 ಲಕ್ಷಗಳನ್ನು ಕೇಂದ್ರ ಸರ್ಕಾರದ ಪಾಲಾಗಿ ರಾಜ್ಯ ಸರ್ಕಾರಕ್ಕೆ ಕ್ರಮಾಂಕ [3]ರಲ್ಲಿ ಓದಲಾದ ಪತ್ರದಲ್ಲಿ ಬಿಡುಗಡೆ ಮಾಡಿದೆ.

ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 9 ಎಸ್‌ಜಿಟಿ 2010, ಬೆಂಗಳೂರು, ದಿನಾಂಕ: 31ನೇ ಮಾರ್ಚ್, 2011**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಮೇಲಿನ ಪ್ರಸ್ತಾವನೆಯಲ್ಲಿನ ಪಟ್ಟಿಯಲ್ಲಿ ತಿಳಿಸಿರುವ ಕೇಂದ್ರಗಳಿಗೆ ಸಂಬಂಧಿಸಿದಂತೆ One Time Additional Central Assistance ಅಡಿಯಲ್ಲಿ ಕೇಂದ್ರ ಸರ್ಕಾರದಿಂದ ಬಿಡುಗಡೆಯಾದ ಅನುದಾನದಲ್ಲಿ 2010–11ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2070–00–800–0–12–059 Other Expenses (Plan) ಅಡಿ ರೂ. 2000.00 ಲಕ್ಷ [ಎರಡು ಸಾವಿರ ಲಕ್ಷ ರೂಪಾಯಿಗಳು ಮಾತ್ರ] ಗಳನ್ನು ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರ [GT&TC], ಬೆಂಗಳೂರು ಸಂಸ್ಥೆಗೆ ಬಿಡುಗಡೆ ಮಾಡಲು ಸರ್ಕಾರ ಮಂಜೂರಾತಿ ನೀಡಿದೆ.

ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಮೊತ್ತವನ್ನು ಹಣ ಪಾವತಿ ರಶೀತಿಯ ಮೇಲೆ ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರ ಮೇಲುಸಹಿ ಪಡೆದು ರಾಜ್ಯ ಹುಜೂರ್ ಖಜಾನೆ, ಬೆಂಗಳೂರು ಇವರಿಂದ ಹಣ ಪಡೆಯಲು ವ್ಯವಸ್ಥಾಪಕ ನಿರ್ದೇಶಕರು, ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ.

ಬಿಡುಗಡೆಯಾದ ಅನುದಾನವನ್ನು ಉದ್ದೇಶಿತ ಕಾರ್ಯಕ್ರಮಗಳಿಗಾಗಿ ಮಾತ್ರ ಉಪಯೋಗಿಸತಕ್ಕದ್ದು ಹಾಗೂ ಇದಕ್ಕಾಗಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ಅದರಡಿಯಲ್ಲಿ ರೂಪಿಸಿರುವ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.

ವ್ಯವಸ್ಥಾಪಕ ನಿರ್ದೇಶಕರು, ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರ, ಬೆಂಗಳೂರು ಇವರು ಮಾಡುವ ಖರ್ಚಿನ ವಿವರಗಳು, ಖರೀದಿಸಿದ ಯಂತ್ರೋಪಕರಣಗಳ ವಿವರ ಹಾಗೂ ಉಪಯೋಗತಾ ಪ್ರಮಾಣ ಪತ್ರವನ್ನು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಗೆ ಹಾಗೂ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 497 Exp-1/11, ದಿನಾಂಕ: 31–3–2011ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1216

**ಕೆ.ಆರ್. ಚಂದ್ರಮ್ಮ**

ಪೀಠಾಧಿಕಾರಿ [ಸಪ್ರಕೈ], ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** ಶಿವಮೊಗ್ಗ ಜಿಲ್ಲೆಯಲ್ಲಿ ಹೊಸದಾಗಿ ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರ [GT&TC] ಸ್ಥಾಪಿಸಲು ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** [1] ವಿಶೇಷ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರು, MSME ಮಂತ್ರಾಲಯ, ನವದೆಹಲಿ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: 21/NMCP/2007/TR-II, ದಿನಾಂಕ: 16–9–2008.

[2] ಅರೆ ಸರ್ಕಾರಿ ಪತ್ರ ಸಂಖ್ಯೆ: ಸಿಐ 32 ಎಸ್‌ಜಿಟಿ 2008, ದಿನಾಂಕ: 5–2–2009.

[3] ಅಭಿವೃದ್ಧಿ ಆಯುಕ್ತರು, MSME ಮಂತ್ರಾಲಯ, ನವದೆಹಲಿ ಇವರ ಪತ್ರ ಸಂಖ್ಯೆ: 21/NMCP/Proposals/2010/TR, ದಿನಾಂಕ: 8–2–2010.

[4] ವ್ಯವಸ್ಥಾಪಕ ನಿರ್ದೇಶಕರು, ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರ, ಬೆಂಗಳೂರು ಇವರ ಪತ್ರ ಸಂಖ್ಯೆ: MD/ GTTC/PS-C&I/Shimoga/Adm.App/2010–11, ದಿನಾಂಕ: 14–7–2010.

**ಪ್ರಸ್ತಾವನೆ:**

ಓದಲಾದ [1]ರ ಪತ್ರದಲ್ಲಿ ಭಾರತ ಸರ್ಕಾರದ ವಿಶೇಷ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರು, MSME ಮಂತ್ರಾಲಯ ಇವರು National Manufacturing Competitiveness Programme [NMCP] ರಡಿಯಲ್ಲಿ ಖಾಸಗಿ ಸಾರ್ವಜನಿಕ ಸಹಭಾಗಿತ್ವದಲ್ಲಿ ಕಿರು ಉಪಕರಣಾಗಾರ ಮತ್ತು ತರಬೇತಿ ಕೇಂದ್ರಗಳನ್ನು ಸ್ಥಾಪಿಸಲು ಯೋಜನೆ ಹಮ್ಮಿಕೊಂಡಿರುವುದಾಗಿ ತಿಳಿಸಿರುತ್ತಾರೆ. ಓದಲಾದ [2]ರ ಪತ್ರದಲ್ಲಿ ಈ ಯೋಜನೆಯಡಿಯಲ್ಲಿ

ರಾಜ್ಯದಲ್ಲಿ 10 ಹೊಸ ಕಿರು ಉಪಕರಣಾಗಾರಗಳನ್ನು ಸ್ಥಾಪಿಸಲು ಹಾಗೂ ಹಾಲಿ ಇರುವ 8 ಕೇಂದ್ರಗಳನ್ನು ಉನ್ನತೀಕರಿಸಲು ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದೆ. ಜಂಟಿ ಅಭಿವೃದ್ಧಿ ಆಯುಕ್ತರು, MSME ಮಂತ್ರಾಲಯ, ನವದೆಹಲಿ, ಇವರು ಓದಲಾದ [3]ರ ಪತ್ರದಲ್ಲಿ ಇದಕ್ಕೆ ಸಂಬಂಧಿಸಿದಂತೆ Project Monitoring Committee [PMC] ಯು ಅದರ 5ನೇ ಸಭೆಯಲ್ಲಿ ರಾಜ್ಯ ಸರ್ಕಾರದ ಕೋರಿಕೆಯನ್ನು ಪರಿಗಣಿಸಿರುವುದಾಗಿ ತಿಳಿಸಿ, ಇದಕ್ಕಾಗಿ ಒಂದು ಕೇಂದ್ರವನ್ನು ಸ್ಥಾಪಿಸಲು ಉದ್ದೇಶಿಸಿರುವ ಸ್ಥಳವನ್ನು quick reviewಗಾಗಿ ಆಯ್ಕೆ ಮಾಡಿ ತಿಳಿಸಲು ಕೋರಿರುತ್ತಾರೆ. ರಾಜ್ಯ ಸರ್ಕಾರವು ಶಿವಮೊಗ್ಗ ಜಿಲ್ಲೆಯ ಭದ್ರಾವತಿಯನ್ನು ಕಿರು ಉಪಕರಣಾಗಾರವನ್ನು ಸ್ಥಾಪಿಸಲು ಆಯ್ಕೆ ಮಾಡಿದೆ ಹಾಗೂ ಈ ಕೇಂದ್ರ ಸ್ಥಾಪಿಸಲು ಕೆ.ಐ.ಎ.ಡಿ.ಬಿ ಗೆ ಜಮೀನನ್ನು ಹಂಚಿಕೆ ಮಾಡಲು ಕೋರಲಾಗಿದೆ. ಶಿವಮೊಗ್ಗ ಜಿಲ್ಲೆಯಲ್ಲಿ ಸ್ಥಾಪಿಸಲು ಉದ್ದೇಶಿಸಿರುವ ಈ ಕಿರು ಉಪಕರಣಾಗಾರ ಮತ್ತು ತರಬೇತಿ ಕೇಂದ್ರದಲ್ಲಿ 30 ವಿದ್ಯಾರ್ಥಿಗಳಿಗೆ Diploma in Tool & Die making ಹಾಗೂ ಇತರೆ Short term courseಗಳನ್ನು 2010–11ರ ಶೈಕ್ಷಣಿಕ ವರ್ಷದಿಂದಲೇ ಬಾಡಿಗೆ ಕಟ್ಟಡದಲ್ಲಿ ನಡೆಸಲು ಸರ್ಕಾರ ಆಡಳಿತಾತ್ಮಕ ಅನುಮೋದನೆ ನೀಡಬೇಕೆಂದು ವ್ಯವಸ್ಥಾಪಕ ನಿರ್ದೇಶಕರು, ಜಿ.ಟಿ.ಟಿ.ಸಿ. ಇವರು ಓದಲಾದ [4]ರ ಪತ್ರದಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 33 ಎಸ್‌ಜಿಟಿ 2010, ಬೆಂಗಳೂರು, ದಿನಾಂಕ: 23ನೇ ಜುಲೈ, 2010**

**ಯೂನಿಕ್ ಕ್ರಮ ಸಂಖ್ಯೆ: 63/2010**

2010–11ರ ಶೈಕ್ಷಣಿಕ ವರ್ಷದಿಂದಲೇ ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರ [GT&TC], ಬೆಂಗಳೂರು ಇವರು ಶಿವಮೊಗ್ಗ ಜಿಲ್ಲೆಯಲ್ಲಿ ಪ್ರಾರಂಭ ಮಾಡಲಿರುವ ಉಪಕೇಂದ್ರದ ಸ್ವಂತ ಕಟ್ಟಡ ನಿರ್ಮಾಣವಾಗುವವರೆಗೆ, ಶಿವಮೊಗ್ಗದಲ್ಲಿ ಬಾಡಿಗೆ ಕಟ್ಟಡದಲ್ಲಿ 30 ವಿದ್ಯಾರ್ಥಿಗಳಿಗೆ Diploma in Tool & Die making ಹಾಗೂ ಇತರೆ Short term course ಗಳನ್ನು ಪ್ರಾರಂಭಿಸಲು ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರವು ತನ್ನ ಸಂಪನ್ಮೂಲಗಳಿಂದಲೇ ಈ ತರಬೇತಿ ಕಾರ್ಯಕ್ರಮಗಳನ್ನು ನಡೆಸತಕ್ಕದ್ದು. ಸರ್ಕಾರದಿಂದ ಯಾವುದೇ ಅನುದಾನವನ್ನು ಈ ತರಬೇತಿಗಾಗಿ ನೀಡಲಾಗುವುದಿಲ್ಲ. ಈ ತರಬೇತಿಗಳನ್ನು AICTE ಮತ್ತು DTE ರವರ ಅನುಮೋದನೆ ಪಡೆದ ನಂತರವೇ ಪ್ರಾರಂಭಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1217 **ಬಿ.ಆರ್.ನಾಗಭೂಷಣ**

ಪೀಠಾಧಿಕಾರಿ [ಸಪ್ರಕೈ], ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ: ಸಿಐ 33 ಎಸ್‌ಜಿಟಿ 2010, ದಿನಾಂಕ: 29ನೇ ಜುಲೈ, 2010**

ಶಿವಮೊಗ್ಗ ಜಿಲ್ಲೆಯಲ್ಲಿ ಹೊಸದಾಗಿ ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರ ಸ್ಥಾಪಿಸಲು ಆಡಳಿತಾತ್ಮಕ ಅನುಮೋದನೆ ನೀಡಿ ಹೊರಡಿಸಿದ ಸರ್ಕಾರದ ಆದೇಶ ಸಂಖ್ಯೆ: ಸಿಐ 15 ಎಸ್‌ಜಿಟಿ 2010, ದಿನಾಂಕ: 23.7.2010 (ಯೂನಿಕ್ ಕ್ರಮ ಸಂಖ್ಯೆ: 63/2010)ರ ಆದೇಶದ ಕಂಡಿಕೆ 2ರಲ್ಲಿನ ಕೊನೆಯ ಸಾಲಿನಲ್ಲಿರುವ "ಈ ತರಬೇತಿಗಳನ್ನು AICTE ಮತ್ತು DTE ರವರ ಅನುಮೋದನೆ ಪಡೆದ ನಂತರವೇ ಪ್ರಾರಂಭಿಸುವುದು" ಎಂಬುದರ ಬದಲಾಗಿ ಈ ಕೆಳಕಂಡಂತೆ ಓದಿಕೊಳ್ಳತಕ್ಕದ್ದು.

"ಈ ತರಬೇತಿಗಳಿಗೆ AICTE ಮತ್ತು DTE ರವರ ಅನುಮೋದನೆಯನ್ನು ಪಡೆಯುವುದು".

ಉಳಿದಂತೆ ಎಲ್ಲಾ ಅಂಶಗಳು ಯಥಾವತ್ ಹಾಗೇ ಇರುತ್ತವೆ. ಯಾವ ಬದಲಾವಣೆಗಳು ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1218 **ಬಿ.ಆರ್. ನಾಗಭೂಷಣ**

ಪೀಠಾಧಿಕಾರಿ [ಸಪ್ರಕೈ], ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** ಕೋಲಾರ ಜಿಲ್ಲೆ ಕೆ.ಜಿ.ಎಫ್.ನಲ್ಲಿ ಪ್ರಾರಂಭಿಸಿದ್ದ ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರ [ಜಿ.ಟಿ.ಟಿ.ಸಿ.]ದ ಶಾಖೆಯನ್ನು ಕೋಲಾರ ನಗರದಲ್ಲಿ ಖಾಲಿ ಇರುವ ಉಣ್ಣೆ ನೂಲುವ ಕೇಂದ್ರಕ್ಕೆ ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ:** [1] ಸರ್ಕಾರಿ ಆದೇಶ ಸಂಖ್ಯೆ: ಸಿಐ 46 ಎಸ್‌ಜಿಟಿ 2005, ದಿನಾಂಕ:23–4–2005.

[2] ವ್ಯವಸ್ಥಾಪಕ ನಿರ್ದೇಶಕರು, ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರ, ಬೆಂಗಳೂರು ಇವರ ಪತ್ರ ಸಂಖ್ಯೆ: TR/MDO/ C&I/KGF/Trg/2008–09, ದಿನಾಂಕ:31–7–2008.

[3] ಸರ್ಕಾರಿ ಆದೇಶ ಸಂಖ್ಯೆ:ವಾಕೈ 01 ಕೈಯೋವಿ 2009, ದಿನಾಂಕ:6–1–2009.

**ಪ್ರಸ್ತಾವನೆ:**

ಓದಲಾದ [1]ರ ಆದೇಶದಲ್ಲಿ ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರದ ಐದು ಹೊಸ ಉಪಕೇಂದ್ರಗಳನ್ನು ಈ ಕೆಳಕಂಡ ಸ್ಥಳಗಳಲ್ಲಿ ಸ್ಥಾಪಿಸಲು ಆಡಳಿತಾತ್ಮಕ ಮಂಜೂರಾತಿ ಆದೇಶ ನೀಡಲಾಗಿದೆ.

[1] ಬೀದರ್ ಜಿಲ್ಲೆಯ ಹುಮನಾಬಾದ್

[2] ರಾಯಚೂರು ಜಿಲ್ಲೆಯ ಲಿಂಗಸುಗೂರ್

[3] ಕೋಲಾರ ಜಿಲ್ಲೆಯ ಕೆ.ಜಿ.ಎಫ್.

[4] ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕನಕಪುರ ಮತ್ತು

[5] ಚಾಮರಾಜನಗರ ಜಿಲ್ಲೆಯ ಗುಂಡ್ಲುಪೇಟೆ

ಓದಲಾದ [2]ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರ, ಬೆಂಗಳೂರು ಇವರು ಕೆಳಕಂಡ ಕಾರಣಗಳಿಂದ ಕೆ.ಜಿ.ಎಫ್.ನಲ್ಲಿನ ಜಿ.ಟಿ.ಟಿ.ಸಿ. ತರಬೇತಿ ಕೇಂದ್ರವನ್ನು ಕೋಲಾರ ನಗರಕ್ಕೆ ಸ್ಥಳಾಂತರಿಸಲು ಕೋರಿರುತ್ತಾರೆ.

* ಅಲ್ಲಿ ದೊರೆಯುವ ಕುಡಿಯುವ ನೀರಿನಲ್ಲಿ ಫ್ಲೋರೈಡ್ ಅಂಶವು ಹೆಚ್ಚಾಗಿದ್ದು ಮತ್ತು ನೀರಿನ ಬಣ್ಣವು ಕಲುಶಿತಗೊಂಡಿರುತ್ತದೆ.
* ಆಹಾರದ ಅಭಾವವು ಹೆಚ್ಚಾಗಿರುವುದರಿಂದ ದೊರಕುವ ಆಹಾರವು 2 ಕಿ.ಮೀ. ದೂರದಲ್ಲಿ ಇರುತ್ತದೆ. ಇದನ್ನು ಸೇವಿಸುವುದರಿಂದ ವಿದ್ಯಾರ್ಥಿಗಳು ಅನಾರೋಗ್ಯದಿಂದ ಬಳಲುತ್ತಿದ್ದಾರೆ.
* ಈ ಸ್ಥಳವು ತರಬೇತಿಗೆ ಸೂಕ್ತವಾಗಿರುವುದಿಲ್ಲ. ಕಾರಣ ಕೈಗಾರಿಕಾ ವಸಾಹತುವಿನಲ್ಲಿ ಬಿದ್ದ ಮಳೆಯ ನೀರು ಚರಂಡಿಯ ಮುಖಾಂತರ ಸಂಸ್ಥೆಯೊಳಗೆ ಆವರಿಸಿಕೊಳ್ಳುತ್ತದೆ.
* ಸಮೀಪದಲ್ಲೆ ಇರುವ ಸೊಳ್ಳೆ ನಿರೋಧಕ ತಯಾರಿಸುವ ಘಟಕದ ವಾಸನೆಯು ಆವರಿಸಿಕೊಂಡು ವಿದ್ಯಾರ್ಥಿಗಳು ಅನಾರೋಗ್ಯಕ್ಕೆ ತುತ್ತಾಗುತ್ತಿದ್ದಾರೆ.
* ತರಬೇತಿಗೆ ಸೇರ್ಪಡೆಯಾಗಿದ್ದ ವಿದ್ಯಾರ್ಥಿಗಳು ಬೇರೆಡೆಗೆ ವರ್ಗಾವಣೆ ಕೋರಿರುತ್ತಾರೆ. ದಿನಾಂಕ:24–6–2006ರಂದು ನಡೆದ ಸಂಸ್ಥೆಯ ಆಡಳಿತ ಮಂಡಳಿ ಸಭೆಯಲ್ಲಿ ಈ ಕೇಂದ್ರವನ್ನು ಬೇರೆ ಕಡೆಗೆ ಸ್ಥಳಾಂತರಿಸಬೇಕು ಎಂದು ತೀರ್ಮಾನಿಸಿದೆ.
* ಆದುದರಿಂದ, ಈ ಕೇಂದ್ರವನ್ನು ಕೋಲಾರದಲ್ಲಿನ ಉಣ್ಣೆ ನೂಲುವ ಕೇಂದ್ರಕ್ಕೆ ಸ್ಥಳಾಂತರಿಸಿದಲ್ಲಿ ಸ್ಥಳೀಯ ಅಭ್ಯರ್ಥಿಗಳು ದೊರಕುವುದಾಗಿ ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಕೋಲಾರ ಹಾಗೂ ಸ್ಥಳೀಯ ಶಾಸಕರು ಹಾಗೂ ಜಿಲ್ಲಾ ಉಸ್ತುವಾರಿ ಮಂತ್ರಿಗಳೂ ಸಹ ಅಭಿಪ್ರಾಯಪಟ್ಟಿರುತ್ತಾರೆ.

ಓದಲಾದ [3]ರ ಆದೇಶದಲ್ಲಿ ಕೆ.ಜಿ.ಎಫ್.ನಲ್ಲಿರುವ ಹಾಲಿ ಜಿ.ಟಿ.ಟಿ.ಸಿ. ತರಬೇತಿ ಕೇಂದ್ರವನ್ನು ಕೋಲಾರ ನಗರದಲ್ಲಿ ಖಾಲಿ ಇರುವ ಉಣ್ಣೆ ನೂಲುವ ಕಟ್ಟಡಕ್ಕೆ ಜಿ.ಟಿ.ಟಿ.ಸಿ. ಸಂಸ್ಥೆಯ ತರಬೇತಿ ಕೇಂದ್ರದ ಸ್ಥಾಪನೆಗಾಗಿ ಬಳಸಿಕೊಳ್ಳಲು ಅನುಮತಿ ನೀಡಲಾಗಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 21 ಎಸ್‌ಜಿಟಿ 2008, ಬೆಂಗಳೂರು, ದಿನಾಂಕ: 15ನೇ ಜನವರಿ, 2009 ಯೂನಿಕ್ ಕ್ರಮ ಸಂಖ್ಯೆ:2/2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ, ದಿನಾಂಕ: 23–4–2005ರ ಆದೇಶ ಸಂಖ್ಯೆ:ಸಿಐ 46 ಎಸ್‌ಜಿಟಿ 2005ರನ್ವಯ ಕೆ.ಜಿ.ಎಫ್.ನಲ್ಲಿ ಪ್ರಾರಂಭಿಸಿರುವ ಜಿ.ಟಿ.ಟಿ.ಸಿ. ತರಬೇತಿ ಕೇಂದ್ರವನ್ನು ಕೋಲಾರ ನಗರದಲ್ಲಿ ಖಾಲಿ ಇರುವ ಉಣ್ಣೆ ನೂಲುವ ಕಟ್ಟಡಕ್ಕೆ ಸ್ಥಳಾಂತರಿಸಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1219

**ಬಿ.ಆರ್. ನಾಗಭೂಷಣ**

ಪೀಠಾಧಿಕಾರಿ [ಸಪ್ರಕೈ], ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** ತುಮಕೂರು ಜಿಲ್ಲೆಯಲ್ಲಿ ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಉಪಕೇಂದ್ರವನ್ನು ಸ್ಥಾಪಿಸುವ ಬಗ್ಗೆ ಹಾಗೂ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಅಲ್ಪಸಂಖ್ಯಾತರು ಮತ್ತು ಹಿಂದುಳಿದ ವರ್ಗದವರಿಗೆ ಅಲ್ಪಾವಧಿ ತರಬೇತಿ ನೀಡುವುದರ ಬಗ್ಗೆ.

**ಓದಲಾಗಿದೆ:** [1] ದಿನಾಂಕ:27–2–2006ರಂದು ನಡೆದ ಜಿಲ್ಲಾ ಮಟ್ಟದ ಏಕಗವಾಕ್ಷಿ ಸಮಿತಿ ಸಭೆಯ ನಡವಳಿ.

[2] ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ತುಮಕೂರು ಇವರ ಪತ್ರ ಸಂಖ್ಯೆ: ಜಿಕೈಕೇ: ತುಮ: ಸನಿ–2/ಜಿಟಿಟಿಸಿ/08–09, ದಿನಾಂಕ: 18–11–2008.

[3] ವ್ಯವಸ್ಥಾಪಕ ನಿರ್ದೇಶಕರು, ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರ, ಇವರ ದಿನಾಂಕ: 7–4–2009ರ ಪತ್ರ.

[4] ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ತುಮಕೂರು ಇವರ ಪತ್ರ ಸಂಖ್ಯೆ: ಜಿಕೈಕೇ: ತುಮ: ಸನಿ–2/ ಜಿಟಿಟಿಸಿ/09–10, ದಿನಾಂಕ:27–5–2009.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ [1]ರಲ್ಲಿ ಓದಲಾದ ನಡವಳಿಯಲ್ಲಿ ದಿನಾಂಕ:27–2–2006ರಂದು ಅಧ್ಯಕ್ಷರು, ಜಿಲ್ಲಾ ಮಟ್ಟದ ಏಕಗವಾಕ್ಷಿ ಸಮಿತಿ ಸಭೆ ಹಾಗೂ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ ಅವರ ಅಧ್ಯಕ್ಷತೆಯಲ್ಲಿ ನಡೆದ ಜಿಲ್ಲಾ ಮಟ್ಟದ ಏಕಗವಾಕ್ಷಿ ಸಮಿತಿ ಸಭೆಯಲ್ಲಿ ವಿಷಯ ಸಂಖ್ಯೆ: 4ರಲ್ಲಿ

ತುಮಕೂರು ಜಿಲ್ಲೆಯಲ್ಲಿ ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರ [GT & TC] ಇಲ್ಲದೇ ಇರುವ ವಿಷಯ ಹಾಗೂ ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರದಿಂದ ಎಸ್.ಎಸ್.ಎಲ್.ಸಿ. ಉತ್ತೀರ್ಣರಾದ ನಂತರ ಅಭ್ಯರ್ಥಿಗಳಿಗೆ ತಾಂತ್ರಿಕ ಜ್ಞಾನ ಪಡೆದು ಉದ್ಯೋಗ ಪಡೆದುಕೊಳ್ಳಲು ಇರುವ ಅವಕಾಶ ಕುರಿತು ಸವಿವರವಾಗಿ ಚರ್ಚಿಸಿ, ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರವು ತುಮಕೂರಿಗೆ ಅತೀ ಅವಶ್ಯವಿರುತ್ತದೆ ಎಂದೂ ಹಾಗೂ ಹಿಂದಿನ ಜಿಲ್ಲಾ ಕೈಗಾರಿಕಾ ತರಬೇತಿ ಕೇಂದ್ರವು ಪ್ರಸ್ತುತ ಕಾರ್ಯಸ್ಥಗಿತಗೊಂಡಿರುವುದರಿಂದ ಈ ಸಂಸ್ಥೆಯಲ್ಲಿರುವ ಮೂಲ ಸವಲತ್ತುಗಳಾದ ಕಟ್ಟಡ ಮತ್ತು ಯಂತ್ರೋಪಕರಣಗಳನ್ನು ಉಪಯೋಗಿಸಿಕೊಳ್ಳಲು ಕೂಡಲೇ ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರ ಕಾರ್ಯ ಆರಂಭಿಸುವುದು ಸೂಕ್ತವೆಂದು ನಿರ್ಣಯಿಸಲಾಗಿದೆ.

ಮೇಲೆ ಕ್ರಮಾಂಕ [2]ರಲ್ಲಿ ಓದಲಾದ ಪತ್ರದಲ್ಲಿ ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ತುಮಕೂರು ಇವರು ಈಗಾಗಲೇ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ತುಮಕೂರು ಇವರು ದಿನಾಂಕ:30-10-2008ರಲ್ಲಿ ಜಿಲ್ಲಾ ಕೈಗಾರಿಕಾ ಕೇಂದ್ರದ ಕಟ್ಟಡ ಹಾಗೂ ಭೂಮಿ ಸೇರಿದಂತೆ 3-00 ಎಕರೆ ಪ್ರದೇಶವನ್ನು ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರಕ್ಕೆ ಹಸ್ತಾಂತರಿಸಲು ಅನುಮೋದನೆ ನೀಡಿರುತ್ತಾರೆ ಎಂದು ತಿಳಿಸಿರುತ್ತಾರೆ.

ಮೇಲೆ ಕ್ರಮಾಂಕ [3]ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರ ಇವರು ತುಮಕೂರು ಜಿಲ್ಲೆಯಲ್ಲಿ ಕೈಗಾರಿಕೆ ಇಲಾಖೆ, ಸಮಾಜ ಕಲ್ಯಾಣ ಇಲಾಖೆ ಅಲ್ಪಸಂಖ್ಯಾತರ ಮತ್ತು ಹಿಂದುಳಿದ ವರ್ಗಗಳ ಇಲಾಖೆ ವತಿಯಿಂದ ನಡೆಯುವ ಅಲ್ಪಾವಧಿ ತರಬೇತಿ ಕೋರ್ಸ್‌ಗಳಿಗೆ ಆಯ್ಕೆಯಾದ ವಿದ್ಯಾರ್ಥಿಗಳಿಗೆ ತರಬೇತಿ ಕೋರ್ಸ್‌ಗಳನ್ನು ನಡೆಸಲು ಹಾಗೂ ಹಿರೇಹಳ್ಳಿಯಲ್ಲಿ ಜಿ.ಟಿ.ಟಿ.ಸಿ. ಉಪಕೇಂದ್ರವನ್ನು ಆರಂಭಿಸಲು ಆಡಳಿತಾತ್ಮಕ ಮಂಜೂರಾತಿ ಹಾಗೂ ಆದೇಶ ನೀಡಲು ಕೋರಿರುತ್ತಾರೆ.

ಮೇಲೆ ಕ್ರಮಾಂಕ [4]ರಲ್ಲಿ ಓದಲಾದ ಪತ್ರದಲ್ಲಿ, ಜಿಲ್ಲಾ ಕೈಗಾರಿಕಾ ಕೇಂದ್ರದ ಕಟ್ಟಡ ಮತ್ತು ಅದರಲ್ಲಿರುವ ಯಂತ್ರೋಪಕರಣಗಳನ್ನು ಈಗಾಗಲೇ ಜಿ.ಟಿ.ಟಿ.ಸಿ.ಯ ಸ್ವಾಧೀನಕ್ಕೆ ನೀಡಲಾಗಿದೆ. ಸದರಿ ಕಟ್ಟಡ ಮತ್ತು ಯಂತ್ರೋಪಕರಣಗಳ ಸುರಕ್ಷತೆಯ ಸಲುವಾಗಿ ಭದ್ರತಾ ಸಿಬ್ಬಂದಿಗಳನ್ನು ನೇಮಿಸಲು ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ತುಮಕೂರು ಇವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ವಿವರವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 13 ಎಸ್‌ಜಿಟಿ 2009, ಬೆಂಗಳೂರು, ದಿನಾಂಕ: 18ನೇ ಜೂನ್, 2009 ಯೂನಿಕ್ ಕ್ರಮ ಸಂಖ್ಯೆ:36/2009**

ತುಮಕೂರು ಜಿಲ್ಲೆಯಲ್ಲಿ ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಉಪ ಕೇಂದ್ರವನ್ನು ಸ್ಥಾಪಿಸಲು ಹಾಗೂ ತುಮಕೂರು ಜಿಲ್ಲೆಯ ಹಿರೇಹಳ್ಳಿ ಜಿಲ್ಲಾ ಕೈಗಾರಿಕಾ ಕೇಂದ್ರದ ಕಟ್ಟಡದಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಅಲ್ಪಸಂಖ್ಯಾತರು ಮತ್ತು ಹಿಂದುಳಿದ ವರ್ಗದವರಿಗೆ ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರದ ಮೂಲಕ ಅಲ್ಪಾವಧಿ ತರಬೇತಿ ನೀಡಲು ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

(i) ಸಮಾಜ ಕಲ್ಯಾಣ ಇಲಾಖೆಯು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಅಲ್ಪಸಂಖ್ಯಾತರು ಮತ್ತು ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ನಿಗದಿಪಡಿಸಿರುವ ಮಾರ್ಗಸೂಚಿಗಳಿಗೆ ಅನುಗುಣವಾಗಿ ಸೌಲಭ್ಯಗಳನ್ನು ಒದಗಿಸತಕ್ಕದ್ದು.

(ii) ಸರ್ಕಾರಿ ಉಪಕರಣಾಗಾರ ಮತ್ತು ತರಬೇತಿ ಕೇಂದ್ರದ ಮೂಲಕ ಅಲ್ಪಾವಧಿ ತರಬೇತಿಯನ್ನು ಸರ್ಕಾರದಿಂದ ಅನುಮೋದಿತವಾಗಿರುವ ನಿಯಮಗಳನ್ವಯ ಸಂಬಂಧಪಟ್ಟ ವಿಷಯಗಳ ತರಬೇತಿಯನ್ನು ನೀಡತಕ್ಕದ್ದು.

(iii) ಈ ತರಬೇತಿಗಾಗಿ ತರಬೇತಿ ಕೇಂದ್ರಕ್ಕೆ ಸರ್ಕಾರದಿಂದ ಅನುದಾನವನ್ನು ಪ್ರತ್ಯೇಕವಾಗಿ ಬಿಡುಗಡೆ ಮಾಡಲಾಗುವುದಿಲ್ಲ.

(iv) ಸಂಸ್ಥೆಯು ತನ್ನ ಹಣಕಾಸಿನ ಮೂಲದಿಂದಲೇ ಈ ತರಬೇತಿಗಳ ವೆಚ್ಚ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1220

**ಬಿ.ಆರ್. ನಾಗಭೂಷಣ**

ಪೀಠಾಧಿಕಾರಿ [ಸಪ್ರಕೈ], ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** 2010-11ನೇ ಸಾಲಿನಲ್ಲಿ ರಾಜ್ಯ ಹಿಂದುಳಿದ ವರ್ಗಗಳ ಆಯೋಗದ ಕಾರ್ಯನಿರ್ವಹಣೆಗೆ 4ನೇ (ನಾಲ್ಕನೇ) ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಪತ್ರ ಸಂಖ್ಯೆ: ಕರಾಹಿಂವಆ/ಲೇಶಾ/ಸಿಆರ್-05/2010-11, ದಿನಾಂಕ:09.11.2010. ಸದಸ್ಯ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ, ಬೆಂಗಳೂರು ಇವರಿಂದ.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಸದಸ್ಯ ಕಾರ್ಯದರ್ಶಿಗಳು, ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ ರವರು 2010-11ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗದ ವೇತನ ಹಾಗೂ ಕಾರ್ಯ ನಿರ್ವಹಣೆಗಾಗಿ ಯೋಜನೇತರ ಲೆಕ್ಕಶೀರ್ಷಿಕೆ 2225-03-800-0-01-101 ಸಹಾಯಾನುದಾನ ಅಡಿಯಲ್ಲಿ ರೂ.100.37 ಲಕ್ಷಗಳನ್ನು ಆಯವ್ಯಯದಲ್ಲಿ ಒದಗಿಸಲಾಗಿದ್ದು, ಸದರಿ ಮೊತ್ತದಲ್ಲಿ ನಾಲ್ಕನೇ ಕಂತಾಗಿ ರೂ.25.37 ಲಕ್ಷಗಳನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ.

ಆಯೋಗದ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 251 ಬಿಸಿಎ 2010, ಬೆಂಗಳೂರು, ದಿನಾಂಕ: 23ನೇ ಫೆಬ್ರವರಿ, 2011**

ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗದ ವೇತನ ಹಾಗೂ ಕಾರ್ಯನಿರ್ವಹಣೆಗಾಗಿ ಯೋಜನೇತರ ಲೆಕ್ಕಶೀರ್ಷಿಕೆ 2225-03-800-0-01-101 ಸಹಾಯಾನುದಾನ (ಯೋಜನೇತರ) ಅಡಿಯಲ್ಲಿ ರೂ.100.37 ಲಕ್ಷಗಳನ್ನು ಆಯವ್ಯಯದಲ್ಲಿ ಒದಗಿಸಲಾಗಿದ್ದು, ಸದರಿ

ಅನುದಾನದಲ್ಲಿ ನಾಲ್ಕನೇ ಕಂತಾಗಿ ರೂ.25.37 ಲಕ್ಷಗಳನ್ನು (ಇಪ್ಪತ್ತೈದು ಲಕ್ಷದ ಮೂವತ್ತೇಳು ಸಾವಿರ ಮಾತ್ರ) ಈಗಾಗಲೇ ಬಿಡುಗಡೆ ಆಗಿರುವ ಮೊತ್ತಕ್ಕೆ ವಿವರಗಳನ್ನು ಒದಗಿಸುವ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲಾಗಿದೆ.

ಮೇಲ್ಕಂಡ ಅನುದಾನ ವೆಚ್ಚಕ್ಕೆ ಸಂಬಂಧಪಟ್ಟ ಬಿಲ್ಲುಗಳಿಗೆ ಮೇಲು ರುಜು ಮಾಡಲು ಸದಸ್ಯ ಕಾರ್ಯದರ್ಶಿಗಳು, ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ, ಬೆಂಗಳೂರು. ಇವರಿಗೆ ಅನುಮತಿ ನೀಡಲಾಗಿದೆ.

ಈ ಆದೇಶವನ್ನು ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ: 16.05.2008ರ ಷರತ್ತುಗಳನ್ವಯ ಹಾಗೂ ಆರ್ಥಿಕ ಇಲಾಖೆಯ ಅಧಿಕೃತ ಜ್ಞಾಪನ ಸಂಖ್ಯೆ: ಎಫ್‌ಡಿ 4 ಬಿಪಿಇ 2010, ದಿನಾಂಕ:31.03.2010ರಂತೆ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ಪ್ರದತ್ತವಾಗಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1221

**ಎಂ.ಎಂ. ಬಾಟೆ**

ಸರ್ಕಾರದ ಅಧೀನ ಕಾರ್ಯದರ್ಶಿ–3, ಸಮಾಜ ಕಲ್ಯಾಣ ಇಲಾಖೆ

## ಸಮಾಜ ಕಲ್ಯಾಣ ಸಚಿವಾಲಯ

**ಸಂಖ್ಯೆ: ಸಕಇ 251 ಬಿಸಿಎ 2010, ದಿನಾಂಕ: 8ನೇ ಮಾರ್ಚ್, 2011**

**ತಿದ್ದುಪಡಿ**

ಸರ್ಕಾರದ ಆದೇಶ ಸಂಖ್ಯೆ:ಸಕಇ 251 ಬಿಸಿಎ 2010, ದಿನಾಂಕ: 23.02.2011ರ ಆದೇಶದ ಭಾಗದ 2ನೇ ಪ್ಯಾರಾದ 2ನೇ ಸಾಲಿನಲ್ಲಿ ಬರುವ ಸದಸ್ಯ ಕಾರ್ಯದರ್ಶಿಗಳು, ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ, ಬೆಂಗಳೂರು ಇವರಿಗೆ" ಎಂಬುದನ್ನು "ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು ಇವರಿಗೆ" ಎಂಬುದಾಗಿ ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1222

**ಎಂ.ಎಂ. ಬಾಟೆ**

ಸರ್ಕಾರದ ಅಧೀನ ಕಾರ್ಯದರ್ಶಿ–3, ಸಮಾಜ ಕಲ್ಯಾಣ ಇಲಾಖೆ

## ಕಾರ್ಮಿಕ ಸಚಿವಾಲಯ

**ವಿಷಯ:** ಸಿಓಇ ಸಂಸ್ಥೆಗಳಲ್ಲಿ ಸ್ಥಾಪಿಸಿರುವ ಪ್ಲೇಸ್‌ಮೆಂಟ್ ಸೆಲ್‌ಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ತರಬೇತಿ ಅಧಿಕಾರಿಗಳು/ಕಿರಿಯ ತರಬೇತಿ ಅಧಿಕಾರಿಗಳಿಗೆ ಗೌರವ ಸಂಭಾವನೆ ನೀಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ, ಇವರ ಪತ್ರ ಸಂ. ಉತನಿ/ತರಬೇತಿ/ಸಿಓಇ–Placement/ ವಿವ–33/2009–10, ದಿನಾಂಕ: 05/08/2009ಕ್ಕೆ ಅಂತ್ಯಗೊಂಡ ಪತ್ರ ವ್ಯವಹಾರ.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರದಲ್ಲಿ ಸಿಓಇ ಸಂಸ್ಥೆಗಳಲ್ಲಿ ಸ್ಥಾಪಿಸಿರುವ ಪ್ಲೇಸ್‌ಮೆಂಟ್ ಸೆಲ್‌ಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ತರಬೇತಿ ಅಧಿಕಾರಿಗಳು/ಕಿರಿಯ ತರಬೇತಿ ಅಧಿಕಾರಿಗಳಿಗೆ ಪ್ರತಿ ತಿಂಗಳು ರೂ.3000/–ದಂತೆ ಗೌರವ ಧನವನ್ನು ನೀಡಲು ಹಾಗೂ ಈ ವೆಚ್ಚವನ್ನು ನಿರ್ದೇಶನಾಲಯದಲ್ಲಿ ಸ್ಥಾಪಿಸಲಾಗಿರುವ ಎಸ್‌ಪಿಐಯು (ಸ್ಟೇಟ್ ಪ್ರಾಜೆಕ್ಟ್ ಇಂಪ್ಲಿಮೆಂಟೇಷನ್ ಯುನಿಟ್) ಅಡಿಯಲ್ಲಿ ಬರುವ ಲೆಕ್ಕ ಶೀರ್ಷಿಕೆ 2230–03–101–0–30–059 ಇತರೆ ಖರ್ಚು ಅಡಿಯಲ್ಲಿ ಭರಿಸಲು ಆದೇಶ ಹೊರಡಿಸುವಂತೆ ಕೋರಿರುವರು.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ಕಾಇ 324 ಇಟಿಐ 2009 ಬೆಂಗಳೂರು, ದಿನಾಂಕ: 29ನೇ ಏಪ್ರಿಲ್, 2011**

ಸಿಓಇ ಕೈಗಾರಿಕಾ ತರಬೇತಿ ಸಂಸ್ಥೆಗಳ ಪ್ಲೇಸ್‌ಮೆಂಟ್ ಸೆಲ್‌ಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ತರಬೇತಿ ಅಧಿಕಾರಿಗಳು/ಕಿರಿಯ ತರಬೇತಿ ಅಧಿಕಾರಿಗಳಿಗೆ ಮಾಸಿಕ ರೂ. 1,000/– (ಒಂದು ಸಾವಿರ ರೂಪಾಯಿಗಳು ಮಾತ್ರ)ಗಳ ಗೌರವ ಸಂಭಾವನೆಯನ್ನು ಭವಿಷ್ಯವರ್ತಿಯಾಗಿ ಪಾವತಿಸುವುದಕ್ಕೆ ಮಂಜೂರಾತಿ ನೀಡಲಾಗಿದೆ.

ಈ ಪ್ರಸ್ತಾವನೆಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2230–03–101–0–30–059(ಎಸ್‌ಪಿಐಯು) ರಡಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 86 ವೆಚ್ಚ–9/2011, ದಿನಾಂಕ: 06/04/2011ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1223

**ಜೆ.ಎಸ್. ವಿಶ್ವನಾಥಪ್ಪ**

ಪೀಠಾಧಿಕಾರಿ (ಪ್ರ), ಕಾರ್ಮಿಕ ಇಲಾಖೆ, (ಉದ್ಯೋಗ ಮತ್ತು ತರಬೇತಿ)

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ:** ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ಸಹಾಯಕ ನಿರ್ದೇಶಕರ ವೃಂದ ಬಲವನ್ನು ಪರಿಷ್ಕರಿಸಿ ಪುನರ್ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ:** ಪತ್ರ ಸಂಖ್ಯೆ: ಆಪಸಂ/ಸಿಬ್ಬಂದಿ-1/ವಿವ-62/2009-10, ದಿನಾಂಕ: 17.1.2011 ಹಾಗೂ 12.4.2011

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಪತ್ರಗಳಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ ಇವರು ಕರ್ನಾಟಕ ರಾಜ್ಯ ಪಶುವೈದ್ಯರ ಸಂಘವು ಇತರೆ ಇಲಾಖೆ/ಮಂಡಳಿ/ನಿಗಮಗಳಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳ ಸಂಖ್ಯಾ ಬಲವನ್ನು ಇಲಾಖೆಯ ಸಹಾಯಕ ನಿರ್ದೇಶಕರ ವೃಂದಬಲಕ್ಕೆ ಸೇರ್ಪಡೆಗೊಳಿಸಲು ಕೋರಿರುತ್ತದೆ ಎಂದು ತಿಳಿಸಿರುತ್ತಾರೆ. ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮದ ಪ್ರಕಾರ ಸಹಾಯಕ ನಿರ್ದೇಶಕರ ಹುದ್ದೆಯ ವೃಂದ ಬಲ 435 ಇದ್ದು ತದನಂತರ ಪಶುವೈದ್ಯಕೀಯ ಸಂಸ್ಥೆಗಳ ಉನ್ನತೀಕರಣದಿಂದ ಹಾಗೂ ನೂತನ ಜಿಲ್ಲೆಗಳ ಸ್ಥಾಪನೆಯಿಂದಾಗಿ ಹೊಸದಾಗಿ ಹುದ್ದೆಗಳು ಸೃಜನೆಯಾಗಿರುವುದರಿಂದ ಪ್ರಸ್ತುತ 488 ಸಹಾಯಕ ನಿರ್ದೇಶಕರ ಹುದ್ದೆಗಳು ಮಂಜೂರಾಗಿರುತ್ತದೆಂದು, ಹಾಲಿ ಅನ್ಯಸೇವೆಯಲ್ಲಿ ಸುಜಲ ಜಲಾನಯನ, ಅರಣ್ಯ ಇಲಾಖೆ, ಕರ್ನಾಟಕ ಸಹಕಾರ ಕುಕ್ಕುಟ ಮಹಾಮಂಡಳಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ ನಿಯಮಿತ ಹಾಗೂ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ಒಟ್ಟು 59 ಸಹಾಯಕ ನಿರ್ದೇಶಕರು ಕಾರ್ಯನಿರ್ವಹಿಸುತ್ತಿದ್ದು ಈ ಪೈಕಿ ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ಈಗಾಗಲೇ 10 ಹುದ್ದೆಗಳು ಇಲಾಖೆಯ ವೃಂದ ಬಲಕ್ಕೆ ಸೇರಿದ್ದು ಉಳಿದ ಅನ್ಯಸೇವಾ ಹುದ್ದೆಗಳನ್ನು ಇಲಾಖೆಯ ಸಹಾಯಕ ನಿರ್ದೇಶಕರ ವೃಂದ ಬಲಕ್ಕೆ ಸೇರ್ಪಡೆಗೊಳಿಸುವಂತೆ ಕೋರಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮ – 2000ರಂತೆ ಸಹಾಯಕ ನಿರ್ದೇಶಕರ ಹುದ್ದೆಯ ವೃಂದ ಬಲ 435 ಇದ್ದು ತದನಂತರ ಪಶುವೈದ್ಯಕೀಯ ಸಂಸ್ಥೆಗಳ ಉನ್ನತೀಕರಣ ಮತ್ತು ರಾಮನಗರ, ಚಿಕ್ಕಬಳ್ಳಾಪುರ, ಯಾದಗಿರಿ ಈ ಮೂರು ನೂತನ ಜಿಲ್ಲೆಗಳ ರಚನೆಯಿಂದ ಹೊಸದಾಗಿ 69 ಸಹಾಯಕ ನಿರ್ದೇಶಕರ ಹುದ್ದೆಗಳು ಹಾಗೂ ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ ನಿಯಮಿತದಲ್ಲಿ ಹೊಸದಾಗಿ 10 ಹುದ್ದೆಗಳು ಸೃಜನೆಯಾಗಿರುತ್ತದೆ. ಶೇ. 80ರಷ್ಟು ಹುದ್ದೆಗಳ ರದ್ಧತಿಯಿಂದ 26 ಸಹಾಯಕ ನಿರ್ದೇಶಕರ ಹುದ್ದೆಗಳು ರದ್ದಾಗಿದ್ದು, ದಿನಾಂಕ: 30.4.2011ರ ಅಂತ್ಯಕ್ಕೆ ಪಶುಪಾಲನಾ ಇಲಾಖೆಯಲ್ಲಿ ಸಹಾಯಕ ನಿರ್ದೇಶಕರ ವೃಂದ ಬಲ 488 ಆಗಿರುತ್ತದೆ. ರಾಜ್ಯ ಸರ್ಕಾರದ ವಿವಿಧ ಇಲಾಖೆ/ನಿಗಮ/ಮಂಡಳಿಗಳಲ್ಲಿ ಪಶುಪಾಲನಾ ಇಲಾಖೆಯಿಂದ ನಿಯೋಜನೆ/ಅನ್ಯಸೇವೆ ಮೇಲೆ ಭರ್ತಿ ಮಾಡಬೇಕಾದ ಹುದ್ದೆಗಳು ಸೃಷ್ಟಿಯಾಗಿರುವುದರಿಂದ/ಹುದ್ದೆಗಳ ಸಂಖ್ಯೆಯಲ್ಲಿ ಹೆಚ್ಚಳವಾಗಿರುವುದರಿಂದ ಸಹಾಯಕ ನಿರ್ದೇಶಕರ ವೃಂದ ಬಲವನ್ನು ಪರಿಷ್ಕರಿಸಿ ಪುನರ್ ನಿಗದಿಪಡಿಸುವುದು ಅಗತ್ಯವಾಗಿರುತ್ತದೆ. ಈ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ಸಹಾಯಕ ನಿರ್ದೇಶಕರ ವೃಂದ ಬಲಕ್ಕೆ ಬೇರೆ ಇಲಾಖೆ/ನಿಗಮ/ಮಂಗಳಿಗಳ ನಿಯೋಜನಾ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೇರ್ಪಡೆಗೊಳಿಸಿ ವೃಂದ ಬಲವನ್ನು ಪರಿಷ್ಕರಿಸಿ ಪುನರ್ ನಿಗದಿಪಡಿಸಲು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 282 ಪಅಸೇ 2010, ಬೆಂಗಳೂರು, ದಿನಾಂಕ: 27ನೇ ಏಪ್ರಿಲ್, 2011**

ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಒಟ್ಟು 488 ಸಹಾಯಕ ನಿರ್ದೇಶಕರ ವೃಂದದ (ಸಮೂಹ-ಎ) ಖಾಯಂ ಹುದ್ದೆಗಳಿದ್ದು, ಅವುಗಳ ವಿವರ ಕೆಳಕಂಡಂತಿರುತ್ತದೆ.

| | | |
|---|---|---|
| 1 | ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮ 2000ರಂತೆ ಇರುವ ಹುದ್ದೆಗಳು | 435 |
| 2 | ಪಶುವೈದ್ಯಕೀಯ ಸಂಸ್ಥೆಗಳ ಉನ್ನತೀಕರಣ ಮತ್ತು ನೂತನ ಜಿಲ್ಲೆಗಳ ರಚನೆಯಿಂದ ಸೃಷ್ಟಿಯಾದ ಹುದ್ದೆಗಳು | 69 |
| 3 | ಶೇ. 80ರಷ್ಟು ಹುದ್ದೆಗಳ ರದ್ಧತಿಯಿಂದ ರದ್ದಾದ ಹುದ್ದೆಗಳು | (–) 26 |
| | **ಒಟ್ಟು** | **478** |
| 4 | ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ ನಿಯಮಿತದಲ್ಲಿ ಹೊಸದಾಗಿ ಸೃಜನೆಗೊಂಡು ಇಲಾಖೆಯ ವೃಂದ ಬಲಕ್ಕೆ ಈಗಾಗಲೇ ಸೇರ್ಪಡೆಗೊಂಡಿರುವ ಹುದ್ದೆಗಳು | (+) 10 |
| | **ಖಾಯಂ ವೃಂದ ಹುದ್ದೆಗಳು ಒಟ್ಟು** | **488** |

ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ದಾಖಲೆಗಳ ಅನುಸಾರ ಸದರಿ ಇಲಾಖೆಯ 46 ಸಹಾಯಕ ನಿರ್ದೇಶಕರುಗಳು ಈ ಕೆಳಕಂಡಂತೆ ರಾಜ್ಯ ಸರ್ಕಾರದ ಅಧೀನ ಇಲಾಖೆ/ನಿಗಮ/ಮಂಡಳಿಗಳಲ್ಲಿ ನಿಯೋಜನೆ ಮೇಲಿದ್ದು, ಅದರಂತೆ ನಿಯೋಜನಾ ಮೀಸಲು ಹುದ್ದೆಗಳ ವೃಂದ ಬಲವನ್ನು ಪರಿಷ್ಕರಿಸಿ ಪುನರ್‌ನಿಗದಿಪಡಿಸಿ ಈ ಆದೇಶ ಹೊರಡಿಸಲಾಗಿದೆ.

| ಕ್ರಮ ಸಂಖ್ಯೆ | ಸಂಸ್ಥೆ/ನಿಗಮ | ಹುದ್ದೆ ಸಂಖ್ಯೆ |
|---|---|---|
| 1 | ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ (ಮೃಗಾಲಯ ಒಳಗೊಂಡಂತೆ) | 01 |
| 2 | ಕರ್ನಾಟಕ ಸಹಕಾರಿ ಕುಕ್ಕುಟ ಮಹಾಮಂಡಳಿ | 05 |
| 3 | ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ ನಿಯಮಿತ | 09 |
| 4 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 10 |
| 5 | ಸುಜಲ ಜಲಾನಯನ/ಜಲಾನಯನ ಅಭಿವೃದ್ಧಿ ಇಲಾಖೆ | 01 |
| 6 | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ (ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಹಣಾಧಿಕಾರಿ/ ಜಿಲ್ಲಾ ಪಂಚಾಯತ್‌ನ ಸಹಾಯಕ ಕಾರ್ಯದರ್ಶಿಗಳು) | 20 |
| | **ತಾತ್ಕಾಲಿಕ ಹುದ್ದೆಗಳು ಒಟ್ಟು** | **46** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಕೆ. ಶ್ರೀನಿವಾಸಮೂರ್ತಿ**

ಪಿ.ಆರ್. 1224

ಸರ್ಕಾರದ ಅಧೀನ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಪಶುಸಂಗೋಪನೆ)

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ:** ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಮುನಿರಾಬಾದ್‌ನಲ್ಲಿರುವ ಜಮೀನನ್ನು ತೋಟಗಾರಿಕೆ ಮಹಾ ವಿದ್ಯಾಲಯಕ್ಕೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:**
1) ಪತ್ರ ಸಂಖ್ಯೆ:ಆಪಸಂ/ಆಆಶಾ/ಕ್ಷೇತ್ರ/2010–11, ದಿನಾಂಕ:23–6–2010.
2) ಸರ್ಕಾರದ ಪತ್ರ ಸಂಖ್ಯೆ: ಪಸಂಮೀ 146 ಸಲೆವಿ 2010, ದಿನಾಂಕ:15–7–2010 ಮತ್ತು 27–8–2010.
3) ಸರ್ಕಾರದ ಕಾರ್ಯದರ್ಶಿ, ತೋಟಗಾರಿಕೆ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ತೋಇ/207/ತೋಇವಿ/2010, ದಿನಾಂಕ:16–9–2010.

**ಪ್ರಸ್ತಾವನೆ:**

ಮೇಲೆ(1)ರಲ್ಲಿ ಓದಲಾದ ಪತ್ರದಲ್ಲಿ, ಜಿಲ್ಲಾಧಿಕಾರಿಗಳು, ಕೊಪ್ಪಳ ಮತ್ತು ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ ಇವರು ಜಂಟಿಯಾಗಿ ದಿನಾಂಕ: 22–6–2010ರಂದು ಮುನಿರಾಬಾದ್ ಪ್ರದೇಶದ ತೋಟಗಾರಿಕಾ ಕ್ಷೇತ್ರ ಹಾಗೂ ಮುನಿರಾಬಾದ್‌ನಿಂದ ಕೊಪ್ಪಳಕ್ಕೆ ಹೋಗುವ ಎನ್.ಹೆಚ್–13 ಪಕ್ಕದ ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ ಇವರ ವ್ಯಾಪ್ತಿಯಲ್ಲಿರುವ ಜಮೀನುಗಳಲ್ಲಿ ನಡೆಸಿದ ಸ್ಥಳ ತನಿಖಾ ವರದಿಯನ್ನು ಹಾಗೂ ಸದರಿ ತರಬೇತಿ ಕೇಂದ್ರದಲ್ಲಿ ಲಭ್ಯವಿರುವ 5 ಹಳೆಯ ಕಟ್ಟಡಗಳನ್ನು ತಾತ್ಕಾಲಿಕವಾಗಿ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆ ಇವರ ವಶಕ್ಕೆ ನೀಡಲು ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ ಇವರು ಸರ್ಕಾರದ ಅನುಮತಿ ಕೋರಿರುತ್ತಾರೆ.

ಅದರಂತೆ, ಮೇಲೆ (2)ರಲ್ಲಿ ಓದಲಾದ ಪತ್ರಗಳಲ್ಲಿ ಆಯುಕ್ತರು ಕೋರಿರುವಂತೆ ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಮುನಿರಾಬಾದ್ ಇಲ್ಲಿ ಲಭ್ಯವಿರುವ ಹಳೆಯ ಕಟ್ಟಡಗಳಾದ (1) ಬುಲ್ ಶೆಡ್ಡುಗಳ ಎದುರಿಗೆ ಇರುವ ದಾಸ್ತಾನು ಕೊಠಡಿಗಳು, (2) ಡಾರ್ಮೆಟರಿ ಕೊಠಡಿ, (3) ವೀರ್ಯ ಸಂಕಲನ ಕೇಂದ್ರ ಲಸಿಕೆಗಳ ಶೇಖರಣಾ ವಿಭಾಗ (L Shape Building), (4) ಜಾನುವಾರು ಸಂವರ್ಧನಾ ಮತ್ತು ಪಶುಪಾಲನಾ ತರಬೇತಿ ಕೇಂದ್ರದ ಹಳೆ ಕಟ್ಟಡ, (5) ಗೆಸ್ಟ್ ಹೌಸ್ ಪಕ್ಕದಲ್ಲಿರುವ ಸ್ಟೋರ್ ರೂಮ್ ಇವುಗಳನ್ನು ತಾತ್ಕಾಲಿಕವಾಗಿ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆ ಇವರ ವಶಕ್ಕೆ ನೀಡಲು ಅನುಮತಿ ನೀಡಲಾಗಿದೆ ಹಾಗೂ ಕೊಪ್ಪಳ ಜಿಲ್ಲೆಯ ಮುನಿರಾಬಾದ್‌ನಲ್ಲಿ ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆಯ ಸುಪರ್ದಿನಲ್ಲಿರುವ 186 ಎಕರೆ ಪ್ರದೇಶದಲ್ಲಿ ಕೆರೆ ಅಂಗಳ ಹೊರತುಪಡಿಸಿ ಸ್ಪಷ್ಟವಿರುವ (Clear) 75 ಎಕರೆ ಜಮೀನನ್ನು ತೋಟಗಾರಿಕೆ ಕಾಲೇಜು ಸ್ಥಾಪನೆಗಾಗಿ ತೋಟಗಾರಿಕಾ ಮಹಾ ವಿದ್ಯಾಲಯಕ್ಕೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ಮೇಲೆ (3)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿನಲ್ಲಿ ಕಾರ್ಯದರ್ಶಿ, ತೋಟಗಾರಿಕೆ ಇಲಾಖೆ ಇವರು ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯದ ವತಿಯಿಂದ ಕೊಪ್ಪಳ ಜಿಲ್ಲೆಯ ಮುನಿರಾಬಾದ್‌ನಲ್ಲಿ 2010–11ನೇ ಸಾಲಿನಲ್ಲಿ ಹೊಸದಾಗಿ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯವನ್ನು ಪ್ರಾರಂಭಿಸಬೇಕಾಗಿರುವುದರಿಂದ, ಕೊಪ್ಪಳ ಜಿಲ್ಲೆಯ ಮುನಿರಾಬಾದ್‌ನಲ್ಲಿ ಪಶುಸಂಗೋಪನಾ ಇಲಾಖೆಯ ಸುಪರ್ದಿನಲ್ಲಿರುವ 186.00 ಎಕರೆ ಪ್ರದೇಶದಲ್ಲಿ ಕೆರೆ ಅಂಗಳವನ್ನು ಹೊರತುಪಡಿಸಿ ಸ್ಪಷ್ಟವಿರುವ 75.00 ಎಕರೆ ಜಮೀನನ್ನು ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯಕ್ಕೆ ಹಸ್ತಾಂತರಿಸಲು ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

**ಆದೇಶ ಸಂಖ್ಯೆ: ಪಸಂಮೀ 146 ಸಲೆವಿ 2010, ಬೆಂಗಳೂರು, ದಿನಾಂಕ: 28ನೇ ಏಪ್ರಿಲ್, 2011**

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದನಂತರ, ಸರ್ಕಾರದ ಯೋಜನೆಗಳಾದ ಕೃಷ್ಣಾವ್ಯಾಲಿ ತಳಿಗಳ ಅಭಿವೃದ್ಧಿ ಮತ್ತು ತೋಟಗಾರಿಕಾ ಕಾಲೇಜು ಸ್ಥಾಪನೆ ಎರಡಕ್ಕೂ ಸಮನಾದ ಪ್ರಾಮುಖ್ಯತೆ ನೀಡಬೇಕಾಗಿರುವುದರಿಂದ, ಕೊಪ್ಪಳ ಜಿಲ್ಲೆಯ ಮುನಿರಾಬಾದ್‌ನಲ್ಲಿರುವ ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ ಇದರ ಸುಪರ್ದಿನಲ್ಲಿರುವ 186 ಎಕರೆ ಪ್ರದೇಶದಲ್ಲಿ ಕೆರೆ ಅಂಗಳ ಹೊರತುಪಡಿಸಿ ಸ್ಪಷ್ಟವಿರುವ (Clear) 75 ಎಕರೆ (ಎಪ್ಪತ್ತೈದು ಎಕರೆ) ಜಮೀನನ್ನು ತೋಟಗಾರಿಕೆ ಕಾಲೇಜು ಸ್ಥಾಪನೆಗಾಗಿ ತೋಟಗಾರಿಕಾ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆ ಇದರ ವಶಕ್ಕೆ ಹಸ್ತಾಂತರಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಕೆ. ಶ್ರೀನಿವಾಸಮೂರ್ತಿ**

ಪಿ.ಆರ್. 1225

ಸರ್ಕಾರದ ಅಧೀನ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಪಶುಸಂಗೋಪನೆ)

## ಸಹಕಾರ ಸಚಿವಾಲಯ

**ವಿಷಯ:** ರಾಯಭಾಗ್ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ರಾಯಭಾಗ್, ಬೆಳಗಾವಿ ಜಿಲ್ಲೆ ಇದರ ವಿಶೇಷಾಧಿಕಾರಿಯವರ ಅವಧಿಯನ್ನು ವಿಸ್ತರಿಸುವ ಕುರಿತು

**ಓದಲಾಗಿದೆ: 1.** ಸರ್ಕಾರದ ಆದೇಶ ಸಂಖ್ಯೆ: ಸಇ 09 ಸಸಕಾ 2010, ದಿನಾಂಕ 28-6-2010

2. ವಿಶೇಷಾಧಿಕಾರಿಗಳು, ರಾಯಭಾಗ್ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ರಾಯಭಾಗ್ ಹಾಗೂ ಬೆಳಗಾವಿ ಪ್ರಾಂತದ ಸಹಕಾರ ಸಂಘಗಳ ಜಂಟಿ ನಿಬಂಧಕರ ಪತ್ರ ಸಂಖ್ಯೆ: ಆರ್.ಎಸ್.ಎಸ್.ಕೆ/ಎಸ್.ಒ/2010-11/ 339, ದಿನಾಂಕ 24-2-2011.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ರಾಯಭಾಗ್ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ರಾಯಭಾಗ್, ಬೆಳಗಾವಿ ಜಿಲ್ಲೆ ಇದರ ವಿಶೇಷಾಧಿಕಾರಿಯವರ ಅವಧಿಯನ್ನು ದಿನಾಂಕ 31-3-2011ರವರೆಗೆ ವಿಸ್ತರಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ರಾಯಭಾಗ್ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ರಾಯಭಾಗ್, ಬೆಳಗಾವಿ ಜಿಲ್ಲೆ ಇವರು ತಮ್ಮ ಪತ್ರದಲ್ಲಿ ಸದರಿ ಕಾರ್ಖಾನೆಯಲ್ಲಿ ಈ ಹಿಂದಿನ ಆಡಳಿತ ಮಂಡಳಿಯ ವಿರುದ್ಧ ಇನ್ನು ಕೆಲವು ಆರೋಪಗಳಿಗೆ ಕ್ರಮ ಜರುಗಿಸುವ ಅವಶ್ಯಕತೆಯಿದ್ದು, ಆಡಿಟ್ ವರದಿಯಲ್ಲಿನ ನ್ಯೂನ್ಯತೆಗಳನ್ನು ಸರಿಪಡಿಸಬೇಕಾಗಿದ್ದು, ಬ್ಯಾಂಕುಗಳ ಸಾಲ ರೂ. 92.74 ಕೋಟಿಗಳಷ್ಟು ಇದ್ದು ಇದನ್ನು ಮತ್ತು ಇತರ ಶಾಸನಬದ್ಧ ಬಾಕಿಗಳನ್ನು ತೀರುವಳಿ ಮಾಡಬೇಕಾಗಿದೆಯೆಂದೂ, ಈಗಾಗಲೇ ಕಾರ್ಖಾನೆಯನ್ನು ಗುತ್ತಿಗೆಗೆ ನೀಡಿರುವುದರಿಂದ ಈ ಹಂತದಲ್ಲಿ ಆಡಳಿತ ಮಂಡಳಿಯ ಪುನರ್ ರಚನೆ ಮಾಡುವ ಅವಶ್ಯಕತೆ ಕಂಡು ಬರುವುದಿಲ್ಲವೆಂದು ಆದ್ದರಿಂದ ಕಾರ್ಖಾನೆಯ ಈಗಿನ ವಿಶೇಷಾಧಿಕಾರಿಯವರ ಅಧಿಕಾರಾವಧಿಯನ್ನು ವಿಸ್ತರಿಸುವುದು ಅವಶ್ಯಕವಾಗಿದೆಯೆಂದು ತಿಳಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಕರಣ 31(1) ಅನ್ನು ಸಡಿಲಿಸಿ, ವಿಶೇಷಾಧಿಕಾರಿಗಳ ಕರ್ತವ್ಯದ ಅವಧಿಯನ್ನು ದಿನಾಂಕ: 31-3-2012ರವರೆಗೆ ವಿಸ್ತರಿಸಿ ಆದೇಶಿಸಬೇಕೆಂದು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 12 ಸಸಕಾ 2011, ದಿನಾಂಕ 26-4-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಕರಣ 31(1) ಅನ್ನು ಸಡಿಲಿಸಿ ರಾಯಭಾಗ್ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ರಾಯಭಾಗ್, ಬೆಳಗಾವಿ ಜಿಲ್ಲೆ ಇದರ ವಿಶೇಷಾಧಿಕಾರಿಯ ಅವಧಿಯನ್ನು ದಿನಾಂಕ 30-6-2011ರ ವರೆಗೆ ವಿಸ್ತರಿಸಿ ಆದೇಶಿಸಲಾಗಿದೆ.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 31(1)ರ ಉಪಬಂಧಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ 30-6-2011ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 31(1)ರ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ನೂಲಿ**

ಪಿ.ಆರ್. 1226

ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

## ಅಲ್ಪಸಂಖ್ಯಾತರ ಕಲ್ಯಾಣ ಸಚಿವಾಲಯ

**ವಿಷಯ:** ಬೆಂಗಳೂರು ಉತ್ತರ ತಾಲ್ಲೂಕು, (ಹೆಚ್ಚುವರಿ) ಯಲಹಂಕ ಹೋಬಳಿ ತಿರುಮೇನಹಳ್ಳಿಯಲ್ಲಿ ಹಜ್‌ಘರ್ ನಿರ್ಮಾಣದ ಅಂದಾಜು ವೆಚ್ಚಕ್ಕೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ

**ಓದಲಾಗಿದೆ:** ಸಚಿವ ಸಂಪುಟದ ನಿರ್ಣಯ ಸಂಖ್ಯೆ: ಸಿ:183/2011, ದಿನಾಂಕ 21–4–2011.

**ಪ್ರಸ್ತಾವನೆ:**

2001ರ ಜನಗಣತಿ ಪ್ರಕಾರ ಕರ್ನಾಟಕದಲ್ಲಿ ಒಟ್ಟು ಸರಿಸುಮಾರು 64.63 ಲಕ್ಷ ಮುಸ್ಲಿಂ ಜನಸಂಖ್ಯೆ ಇದೆ. ಇಸ್ಲಾಮಿಕ್ ನಂಬಿಕೆ ಪ್ರಕಾರ ಪ್ರತಿ ಯೋಗ್ಯ ಮುಸ್ಲಿಂ ವ್ಯಕ್ತಿ ತನ್ನ ಜೀವಿತಾವಧಿಯಲ್ಲಿ ಕನಿಷ್ಠ ಪಕ್ಷ ಒಮ್ಮೆಯಾದರೂ ಹಜ್ ಯಾತ್ರೆ ಕೈಗೊಳ್ಳಬೇಕಾಗಿರುತ್ತದೆ. ಹಜ್ ಕಾರ್ಯನಿರ್ವಹಿಸಲು ಯಾತ್ರಾರ್ಥಿಗಳು ಸೌದಿಅರೇಬಿಯಾದ ಪವಿತ್ರ ನಗರಗಳ ಮೆಕ್ಕಾ ಹಾಗೂ ಮದೀನಾ ಯಾತ್ರೆ ಕೈಗೊಳ್ಳಬೇಕಾಗಿರುತ್ತದೆ. ಸಾಮಾನ್ಯವಾಗಿ ಈ ಯಾತ್ರೆಯು 40 ದಿವಸಗಳದ್ದಾಗಿರುತ್ತದೆ. ಇತ್ತೀಚಿನ ದಿನಗಳಲ್ಲಿ ಈ ಯಾತ್ರೆಯನ್ನು ವಿಮಾನದ ಮೂಲಕವೇ ಕೈಗೊಳ್ಳಲಾಗುತ್ತಿದೆ. ಹಾಗಾಗಿ ವಿಮಾನದಲ್ಲಿ ತೆರಳಲು ಯಾತ್ರಾರ್ಥಿಗಳು ಅಂತರಾಷ್ಟ್ರೀಯ ವಿಮಾನನಿಲ್ದಾಣವಿರುವ ಬೆಂಗಳೂರಿಗೆ ಬರಬೇಕಾಗಿರುತ್ತದೆ. ವಿಮಾನದಲ್ಲಿ ತೆರಳುವ ಮೊದಲು ಯಾತ್ರಾರ್ಥಿಗಳು ಯಾತ್ರೆಗೆ ಸಂಬಂಧಿಸಿದಂತೆ ಪಾಸ್‌ಪೋರ್ಟ್, ವೀಸಾ, ವೈದ್ಯಕೀಯ ಪರೀಕ್ಷೆ, ತರಬೇತಿ, ಅಭಿಶಿಕ್ಷಣ ಇತ್ಯಾದಿಗೆ ಸಂಬಂಧಪಟ್ಟಂತೆ ಅಗತ್ಯ ನಿಬಂಧನೆಗಳನ್ನು ಪೂರೈಸಲು ಕನಿಷ್ಠ ಪಕ್ಷ ಎರಡರಿಂದ ಮೂರು ದಿನಗಳು ಬೆಂಗಳೂರಿನಲ್ಲಿ ಉಳಿಯಬೇಕಾಗಿರುತ್ತದೆ. ಎಲ್ಲಾ ಯಾತ್ರಾರ್ಥಿಗಳು ಒಂದು ನಿರ್ದಿಷ್ಟ ಕೇಂದ್ರದಿಂದಲೇ ವಿಮಾನ ಹತ್ತಬೇಕಾಗಿರುತ್ತದೆ. ಅಂತರಾಷ್ಟ್ರೀಯ ವಿಮಾನನಿಲ್ದಾಣದಲ್ಲಿ ಸಾಮಾನ್ಯ ವಿಮಾನಯಾನದ ನಿಬಂಧನೆಗಳನ್ನು ಪೂರೈಸಬೇಕಾಗಿರುವುದರಿಂದ, ಹಜ್ ಯಾತ್ರೆಗೆ ತೆರಳುವ ಯಾತ್ರಾರ್ಥಿಗಳ ನಿಬಂಧನೆಗಳನ್ನು ಪೂರೈಸಲು ವಿಮಾನ ನಿಲ್ದಾಣದಲ್ಲಿ ಸ್ಥಳಾವಕಾಶದ ಕೊರತೆ ಇರುತ್ತದೆ. ಹಾಗಾಗಿ, ನಗರದ ತೆರೆದ ಸ್ಥಳಗಳಲ್ಲಿ ಹಜ್ ಕ್ಯಾಂಪನ್ನು ಸಂಘಟಿಸಲಾಗುತ್ತಿದೆ. ಈ ಕ್ಯಾಂಪುಗಳಲ್ಲಿ ಯಾತ್ರಾರ್ಥಿಗಳಿಗೆ ತಾತ್ಕಾಲಿಕವಾಗಿ ಉಳಿದುಕೊಳ್ಳಲು ಮತ್ತು ಎಮಿಗ್ರೇಷನ್, ಕಸ್ಟಮ್ಸ್ ಇತ್ಯಾದಿಗಳಿಗೆ ಸಂಬಂಧಿಸಿದಂತೆ ಅಗತ್ಯ ನಿಬಂಧನೆಗಳನ್ನು ಪೂರೈಸಲು ವ್ಯವಸ್ಥೆ ಕಲ್ಪಿಸಲಾಗುತ್ತಿದೆ. ಈ ತಾತ್ಕಾಲಿಕ ವ್ಯವಸ್ಥೆಯು ಅನೇಕ ಸಂದರ್ಭಗಳಲ್ಲಿ ಹಲವಾರು ಸಮಸ್ಯೆಗಳು ತಲೆದೋರಲು ಕಾರಣವಾಗಿದೆ. ಹಾಗಾಗಿ ಯಾತ್ರಾರ್ಥಿಗಳಿಗೆ ಒಂದು ಶಾಶ್ವತ ನೆಲೆಯನ್ನು ಕಲ್ಪಿಸಿ, ಅಲ್ಲಿಯೇ ಆಹಾರ, ವಸತಿ, ಎಮಿಗ್ರೇಷನ್ ಮತ್ತು ಕಸ್ಟಮ್ಸ್‌ಗೆ ಸಂಬಂಧಪಟ್ಟ ನಿಯಮ, ನಿಬಂಧನೆಗಳನ್ನು ಪೂರೈಸಿ, ಅಲ್ಲಿಂದ ನೇರವಾಗಿ ವಿಮಾನ ನಿಲ್ದಾಣಕ್ಕೆ ತೆರಳಿ ಪ್ರತ್ಯೇಕ ದ್ವಾರದಿಂದ ವಿಮಾನ ಏರುವಂತೆ ವ್ಯವಸ್ಥೆ ಮಾಡಬೇಕಾಗಿರುತ್ತದೆ. ಮುಂದುವರೆದು, ಯಾತ್ರೆಯಿಂದ ಮರಳಿದ ಮೇಲೆ ತಮ್ಮ ತಮ್ಮ ಸ್ವಂತ ಊರಿಗೆ ರೈಲು ಅಥವಾ ಬಸ್ಸುಗಳ ಮೂಲಕ ತೆರಳುವ ಮೊದಲು ಒಂದು ಅಥವಾ ಎರಡು ದಿನಗಳನ್ನು ಈ ಕ್ಯಾಂಪಿನಲ್ಲಿಯೇ ಕಳೆಯಬೇಕಾಗಿರುತ್ತದೆ.

ಆದುದರಿಂದ, ಕರ್ನಾಟಕ ರಾಜ್ಯದಲ್ಲಿ ಒಂದು ಶಾಶ್ವತ "ಹಜ್‌ಘರ್" ನಿರ್ಮಿಸಲು ಬೆಂಗಳೂರು ಉತ್ತರ ತಾಲ್ಲೂಕಿನ ಯಲಹಂಕ ಹೋಬಳಿಯ ತಿರುಮೇನಹಳ್ಳಿ ಗ್ರಾಮದ ಸರ್ವೆ ನಂ.17ರಲ್ಲಿ 3 ಎಕರೆ, 17 ಗುಂಟೆ ಜಮೀನನ್ನು ಆರಿಸಿಕೊಳ್ಳಲಾಯಿತು. ಯಕೀನ್–ಷಾ–ವಲಿ ದರ್ಗಾಕ್ಕೆ ಸೇರಿರುವ ಈ ನಿವೇಶನವನ್ನು ಸರ್ಕಾರಿ ಆದೇಶ ಸಂಖ್ಯೆ: ಕಂಇ 116 ಭೂಸ್ವಾಭೆ 2010, ದಿನಾಂಕ: 19.07.2010ರಂತೆ ಅಧಿಕೃತವಾಗಿ ಸ್ವಾಧೀನ ಮಾಡಿಕೊಳ್ಳಲಾಯಿತು. ದಿನಾಂಕ: 20.11.2010ರಂದು ಈ ಭೂಮಿಯನ್ನು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ವಶಕ್ಕೆ ತೆಗೆದುಕೊಳ್ಳಲಾಯಿತು.

ಅದರಂತೆ, ಒಂದು ಶಾಶ್ವತ ನೆಲೆಯಾಗಿ "ಹಜ್‌ಘರ್" ಎಂಬ ಹೆಸರಿನ ಕಟ್ಟಡವನ್ನು ಮೇಲೆ ತಿಳಿಸಿರುವ ನಿವೇಶನದಲ್ಲಿ ನಿರ್ಮಿಸುವ ಕಾರ್ಯಕ್ಕೆ ಚಾಲನೆ ನೀಡಲಾಗಿದೆ. 2010–11ನೇ ಸಾಲಿನಲ್ಲಿ ಈ ಉದ್ದೇಶಕ್ಕಾಗಿ ಸರ್ಕಾರವು ರೂ.05.00 ಕೋಟಿಗಳನ್ನು ಬಿಡುಗಡೆಗೊಳಿಸಿದ್ದು, 2011–12ನೇ ಸಾಲಿನಲ್ಲಿ ಸಹ ರೂ.10.00 ಕೋಟಿಗಳನ್ನು ಆಯವ್ಯಯದಲ್ಲಿ ನೀಡಿರುತ್ತದೆ. ನಿಖರ ಅಂದಾಜಿನ ಪ್ರಕಾರ ಒಟ್ಟು ಪ್ರಸ್ತಾಪಿತ "ಹಜ್‌ಘರ್" ನಿರ್ಮಿಸಲು ಸುಮಾರು ರೂ.40.00 ಕೋಟಿ ಖರ್ಚು ತಗುಲಬಹುದು. "ಹಜ್‌ಘರ್" ನಿರ್ಮಾಣಕ್ಕಾಗಿ ಹಣಕಾಸು ಸಂಗ್ರಹಿಸಲು ಮೂಲಗಳನ್ನು ಈ ಕೆಳಗಿನಂತೆ ವ್ಯವಸ್ಥೆ ಮಾಡಲು ಯೋಜಿಸಲಾಗಿದೆ.

| | | | **(ರೂ.ಕೋಟಿಗಳಲ್ಲಿ)** |
|---|---|---|---|
| i) | 2010–11ನೇ ಸಾಲಿನ ಸರ್ಕಾರದ ಅನುದಾನ | – | ರೂ.05.00 |
| ii) | 2011–12ನೇ ಸಾಲಿನ ಸರ್ಕಾರದ ಅನುದಾನ | – | ರೂ.10.00 |
| iii) | ಈ ಉದ್ದೇಶಕ್ಕಾಗಿ ಮೊದಲು ಗುರುತಿಸಿರುವ ನಿವೇಶನದಿಂದ ಮರುಪಾವತಿಯಾದ ಪರಿಹಾರದ ಮೊತ್ತ | – | ರೂ.02.29 |
| iv) | ಕರ್ನಾಟಕ ರಾಜ್ಯ ವಕ್ಫ್ ಮಂಡಳಿ ಮತ್ತು ರಾಜ್ಯದ ಇತರೆ ವಕ್ಫ್ ಸಂಸ್ಥೆಗಳಿಂದ ಕೊಡುಗೆ | – | ರೂ.14.00 |
| v) | ಮುಸ್ಲಿಂ ಶಾಸಕರುಗಳ ಕೊಡುಗೆ | – | ರೂ.01.50 |
| vi) | ಸಾರ್ವಜನಿಕ ದೇಣಿಗೆಗಳು | – | ರೂ.07.21 |
| | **ಒಟ್ಟು** | – | **ರೂ.40.00** |

ಬೆಂಗಳೂರು ಉತ್ತರ ತಾಲ್ಲೂಕು(ಹೆಚ್ಚುವರಿ), ಯಲಹಂಕ ಹೋಬಳಿ, ತಿರುಮೇನಹಳ್ಳಿಯಲ್ಲಿ ಅಂದಾಜು ವೆಚ್ಚ ರೂ.40.00 ಕೋಟಿಯಲ್ಲಿ ಹಜ್ ಘರ್ ನಿರ್ಮಿಸಲು ಕೆ.ಟಿ.ಟಿ.ಪಿ ಕಾಯ್ದೆಯಲ್ಲಿನ ಅಗತ್ಯ ನಿಬಂಧನೆಗಳನ್ನು ಪೂರೈಸುವ ಷರತ್ತಿಗೊಳಪಟ್ಟು ಆಡಳಿತಾತ್ಮಕ ಅನುಮೋದನೆ ನೀಡಿ ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಸಚಿವ ಸಂಪುಟದ ಸಭೆಯಲ್ಲಿ ನಿರ್ಣಯಿಸಲಾಗಿದೆ. ಅದರಂತೆ, ಈ ಕೆಳಕಂಡಂತೆ ಆದೇಶ

**ಸರ್ಕಾರದ ಆದೇಶ ಸಂಖ್ಯೆ: MWD 56 WHJ 2010, ಬೆಂಗಳೂರು, ದಿನಾಂಕ 05-05-2011**

ಈ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಬೆಂಗಳೂರು ಉತ್ತರ ತಾಲ್ಲೂಕು(ಹೆಚ್ಚುವರಿ), ಯಲಹಂಕ ಹೋಬಳಿ, ತಿರುಮೇನಹಳ್ಳಿ ಗ್ರಾಮದ ಸರ್ವೆ ನಂ.17ರ 3 ಎಕರೆ, 17 ಗುಂಟೆ ಜಮೀನಿನಲ್ಲಿ ಅಂದಾಜು ವೆಚ್ಚ ರೂ.40.00 ಕೋಟಿಯಲ್ಲಿ "ಹಜ್‌ಘರ್" ನಿರ್ಮಿಸಲು ಕೆ.ಟಿ.ಟಿಪಿ. ಕಾಯ್ದೆಯಲ್ಲಿನ ಅಗತ್ಯ ನಿಬಂಧನೆಗಳನ್ನು ಪೂರೈಸುವ ಷರತ್ತಿಗೊಳ್ಳಪಟ್ಟು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಆದೇಶವನ್ನು ಸಚಿವ ಸಂಪುಟದ ಟಿಪ್ಪಣಿ ಸಂಖ್ಯೆ: ಸಿ:183/2011, ದಿನಾಂಕ: 21-04-2011ರ ನಿರ್ಣಯದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಬ್ಬಾಸ್ ಷರೀಫ್**

ಪಿ.ಆರ್. 1227

ಸರ್ಕಾರದ ಅಧೀನ ಕಾರ್ಯದರ್ಶಿ,

ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ.

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** 6 ಖಾಯಂ ಲೋಕ್ ಅದಾಲತ್ ಸ್ಥಾಪನೆಯನ್ವಯ 2011-12ನೇ ಸಾಲಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ: 1.** ಸರ್ಕಾರದ ಆದೇಶ ಸಂಖ್ಯೆ: ಲಾ 57 ಎಲ್ಎಂ 2011, ದಿನಾಂಕ 7-4-2011

**2.** ಪತ್ರ ಸಂಖ್ಯೆ: ಪಿಎಲ್ಎ ಗ್ರಾಂಟ್-4/2011-12, ದಿನಾಂಕ 31-3-2011, ಸದಸ್ಯ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರದವರಿಂದ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ 7-4-2011ರ ಆದೇಶದಲ್ಲಿ ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಕ್ರಿಯಾ ಯೋಜನೆಗಳನ್ನು 2011-12ನೇ ಸಾಲಿನಲ್ಲಿ ಮುಂದುವರಿಸಲು ಮಂಜೂರಾತಿ ನೀಡಲಾಗಿದೆ. ಮೇಲೆ (2)ರಲ್ಲಿ ಓದಲಾದ ದಿನಾಂಕ 31-3-2011ರ ಪತ್ರದಲ್ಲಿ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರದ ಸದಸ್ಯ ಕಾರ್ಯದರ್ಶಿಗಳು, 6 ಖಾಯಂ ಲೋಕ್ ಅದಾಲತ್ ಸ್ಥಾಪನೆಯ ಕಛೇರಿಗಳಲ್ಲಿನ ಖರ್ಚು ವೆಚ್ಚಗಳಿಗೆ 2011-12ನೇ ಸಾಲಿಗೆ ರೂ. 25 ಲಕ್ಷಗಳ ಅನುದಾನವನ್ನು ಆಯವ್ಯಯದಲ್ಲಿ (ಯೋಜನೆಗಳಡಿ) ಒದಗಿಸಲಾಗಿದ್ದು, ಸದರಿ ರೂ.25.00 ಲಕ್ಷಗಳನ್ನು ತುರ್ತಾಗಿ ಬಿಡುಗಡೆ ಮಾಡಿ 6 ಜಿಲ್ಲೆಗಳಲ್ಲಿ ಖಾಯಂ ಜನತಾ ನ್ಯಾಯಾಲಯಗಳು ಸುಗಮವಾಗಿ ಕಾರ್ಯನಿರ್ವಹಿಸಲು ಅನುವು ಮಾಡುವಂತೆ ಕೋರಿರುತ್ತಾರೆ. ಪ್ರಸ್ತುತ ಒಟ್ಟು ಮೊತ್ತದಲ್ಲಿ ಲೇಖಾನುದಾನಕ್ಕೆ ಮಾತ್ರ ಸದನದಲ್ಲಿ ಅನುಮೋದನೆ ದೊರೆತಿರುವುದರಿಂದ.

ಸದರಿ ಪ್ರಸ್ತಾವನೆ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಲಾ 11 ಎಲ್ಎಡಿ 2011, ಬೆಂಗಳೂರು, ದಿನಾಂಕ 29-4-2011**

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, 2011-12ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರಕ್ಕೆ 6 ಜಿಲ್ಲೆಗಳಲ್ಲಿ ಖಾಯಂ ಲೋಕ್ ಅದಾಲತ್‌ಗಳ ಸ್ಥಾಪನೆಯ ಕಛೇರಿಗಳಲ್ಲಿನ ಖರ್ಚು ವೆಚ್ಚಗಳ ನಿರ್ವಹಣೆಗೆ ಮೊದಲನೆ ಕಂತಿನಲ್ಲಿ ರೂ. 6.25 ಲಕ್ಷಗಳನ್ನು (ರೂಪಾಯಿ ಆರು ಲಕ್ಷ ಇಪ್ಪತ್ತೈದು ಸಾವಿರ ಮಾತ್ರ) ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2014-00-105-0-11-059 (ಯೋಜನೆ) ಅಡಿ ಭರಿಸುವುದು.

ಸದರಿ ಹಣವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ನಿಯಮಾನುಸಾರ ಬಳಸತಕ್ಕದ್ದು.

ಇದಕ್ಕೆ ಆಂತರಿಕ ಆರ್ಥಿಕ ಸಲಹೆಗಾರರು, ವಸತಿ ನಗರಾಭಿವೃದ್ಧಿ ಹಾಗೂ ಕಾನೂನು ಇಲಾಖೆರವರ ಟಿಪ್ಪಣಿ ಸಂಖ್ಯೆ: ವನಇ 165 ಅಂಆಬಿ 2011 ದಿನಾಂಕ 23-4-2011ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1228

**ಹೆಚ್.ಆರ್. ಶಕುಂತಲ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ನಾಗರಾಜು, ಸಹಾಯಕ ಅಭಿಯೋಜಕ ನಿರ್ದೇಶಕರು, ಆರಕ್ಷಕ ಅಧೀಕ್ಷಕರ ಕಛೇರಿ, ಮಡಿಕೇರಿ (ಪ್ರಭಾರ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಿನ್ಸಿಪಾಲ್ ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಡಿಕೇರಿ) (ಹಾಲಿ ಅಮಾನತ್ತಿನಲ್ಲಿರುವವರು) ಇವರ ವಿರುದ್ಧ ದಾಖಲಾಗಿರುವ ಟ್ರ್ಯಾಪ್ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ಆದೇಶ ನೀಡುವ ಕುರಿತು.

**ಓದಲಾಗಿದೆ: 1.** ಸರ್ಕಾರದ ಆದೇಶ ಸಂಖ್ಯೆ: ಒಇ 131 ಪಿಪಿಇ 2010, ದಿನಾಂಕ 22–5–2010

**2.** ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ (ಜಿ)/ಎಂ–20/ಸಿಆರ್–1/2010 ಮಡಿಕೇರಿ, ದಿನಾಂಕ 1–2–2011

**3.** ತನಿಖಾಧಿಕಾರಿಯ ವರದಿ ದಿನಾಂಕ 10–1–2011

**4.** ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಸ್ವತ್ತುಗಳ ಪಟ್ಟಿ ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಸ್ತಾವನೆ:**

ಶ್ರೀ ನಾಗರಾಜು, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರ ಕಛೇರಿ, ಮಡಿಕೇರಿ ಇವರು ಪ್ರಿನ್ಸಿಪಾಲ್ ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಡಿಕೇರಿ ಇಲ್ಲಿ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ಪ್ರಭಾರ ವ್ಯವಸ್ಥೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ 22–4–2010ರಂದು ಮಡಿಕೇರಿ ಸಿವಿಲ್ ನ್ಯಾಯಾಲಯದ ಸಿ.ಸಿ. ಸಂಖ್ಯೆ: 1794/2007ರಲ್ಲಿ ದಾಖಲಾದ ಪ್ರಕರಣದಲ್ಲಿ ಫಿರ್ಯಾದುದಾರರಿಂದ ಲಂಚವನು ಪಡೆಯುತ್ತಿದ್ದಾಗ ಮಡಿಕೇರಿ ಲೋಕಾಯುಕ್ತ ಪೊಲೀಸರ ಬಲೆಗೆ ಸಿಕ್ಕಿದ್ದರಿಂದ ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ದಿನಾಂಕ 22–4–2010ರಿಂದ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ.

ಶ್ರೀ ನಾಗರಾಜು, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರ ಕಛೇರಿ, ಮಡಿಕೇರಿ, (ಪ್ರಭಾರ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಿನ್ಸಿಪಾಲ್ ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಡಿಕೇರಿ) ಮಡಿಕೇರಿ ಇವರ ವಿರುದ್ಧ ಮೊಕದ್ದಮೆ ಸಂಖ್ಯೆ:01/2010 ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಅನ್ವಯ ಕಲಂ 7, 13(1)(ಡಿ) ಸಹ ಕಲಂ 13(2)ರ ಲಂಚ ನಿರೋಧಕ ಕಾಯ್ದೆ 1988ರ ಅಡಿಯಲ್ಲಿ ಕರ್ನಾಟಕ ಲೋಕಾಯುಕ್ತ, ಮಡಿಕೇರಿ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯು ಅಂತಿಮ ವರದಿ ಮತ್ತು ತನಿಖಾ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು ಮೇಲೆ ಓದಲಾದ (3)ರೊಡನೆ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ (2)ರ ತಮ್ಮ ಪತ್ರ ದಿನಾಂಕ 1–2–2011ರೊಡನೆ ಕಳುಹಿಸುತ್ತಾ, ಆಪಾದಿತನನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು, ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988 ಕಲಂ 7, 13(1)(ಡಿ)ರ ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 19(1)(ಬಿ)ರನ್ವಯ ಮಂಜೂರಾತಿ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ (2)ರ ಪತ್ರ ದಿನಾಂಕ 1–2–2011ರೊಂದಿಗೆ ಕಳುಹಿಸಿಕೊಟ್ಟ, ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1) ಶ್ರೀ ಪಿ.ಟಿ. ಪೂಣಚ್ಚ ಬಿನ್ ಲೇಟ್ ಪಿ.ಕೆ. ತಿಮ್ಮಯ್ಯ, ಪಾಲಂಗಾಲ ಗ್ರಾಮ, ಕರಡ ಅಂಚೆ, ವಿರಾಜಪೇಟೆ ತಾಲ್ಲೂಕು, ಕೊಡಗು ಜಿಲ್ಲೆ ಇವರ ಫಿರ್ಯಾದಿ ದಿನಾಂಕ 22–4–2010.
2) ಪ್ರಥಮ ವರ್ತಮಾನ ವರದಿ, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಡಿಕೇರಿ, ಕೊಡಗು ಜಿಲ್ಲೆಯ ಪ್ರಕರಣದ ಸಂಖ್ಯೆ: 1/2010.
3) ಪ್ರಾಯೋಗಿಕ ಪಂಚನಾಮೆ ದಿನಾಂಕ 22–4–2010
4) ಟ್ರ್ಯಾಪ್ ಮಹಜರ್ ದಿನಾಂಕ 22–4–2010
5) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ: ಎಂಆರ್‌ಎಲ್/ಲೋಕ್/14/2009–10, ದಿನಾಂಕ 29–6–2010
6) ಕೃತ್ಯ ನಡೆದ ಸ್ಥಳದ ನಕಾಶೆ

**ಸಾಕ್ಷಿಗಳ ಹೇಳಿಕೆಗಳು:**

1) ಶ್ರೀ ಪಿ.ಟಿ. ಪೂಣಚ್ಚ ಬಿನ್ ಲೇಟ್ ಪಿ.ಕೆ. ತಿಮ್ಮಯ್ಯ, ಪಾಲಂಗಾಲ ಗ್ರಾಮ, ಕರಡ ಅಂಚೆ, ವಿರಾಜಪೇಟೆ ತಾಲ್ಲೂಕು, ಕೊಡಗು ಜಿಲ್ಲೆ
2) ಶ್ರೀ ಅಜ್ಜೇಟ್ಟಿರ ಮಂದಣ್ಣ ಯಾನೆ ಮಿಟ್ಟು, ವ್ಯವಸಾಯ ವೃತ್ತಿ, ಹಳೆ ತಾಲ್ಲೂಕು, ನಾಪೋಕ್ಲು, ಮಡಿಕೇರಿ ತಾಲ್ಲೂಕು
3) ಶ್ರೀ ನಂಜಪ್ಪ, ವಿಶೇಷ ಸಾರ್ವಜನಿಕ ಅಭಿಯೋಜಕರು, ಜಿಲ್ಲಾ ಸತ್ರ ನ್ಯಾಯಾಲಯ, ಮಡಿಕೇರಿ, ಕೊಡಗು ಜಿಲ್ಲೆ
4) ಶ್ರೀ ಲಕ್ಷ್ಮೀಶ್, ಮ್ಯಾನೇಜರ್, ಸರ್ಕಾರಿ ಅಭಿಯೋಜಕರವರ ಕಛೇರಿ, ಜಿಲ್ಲಾ ಸತ್ರ ನ್ಯಾಯಾಲಯ, ಮಡಿಕೇರಿ, ಕೊಡಗು ಜಿಲ್ಲೆ
5) ಶ್ರೀ ಬಿ. ಮಂಜುನಾಥ್, ದಲಾಯತ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಮಡಿಕೇರಿ, ಕೊಡಗು ಜಿಲ್ಲೆ
6) ಶ್ರೀಮತಿ ಕೆ.ಜಿ. ಅಶ್ವಿನಿ, ಸಹಾಯಕ ಸರ್ಕಾರಿ ಅಭಿಯೋಜಕರು, ಅಪರ ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಡಿಕೇರಿ, ಕೊಡಗು ಜಿಲ್ಲೆ
7) ಶ್ರೀಮತಿ ಜಿ. ಪುಷ್ಪ, ಕಿರಿಯ ಇಂಜಿನಿಯರ್, ನಂ. 1ನೇ ಉಪ ವಿಭಾಗ, ಲೋಕೋಪಯೋಗಿ ಇಲಾಖೆ, ಮಡಿಕೇರಿ, ಕೊಡಗು ಜಿಲ್ಲೆ
8) ಶ್ರೀ ಬಿ.ಕೆ. ಮೋಹನ್, ಪೊಲೀಸ್ ಕಾನ್ಸ್‌ಟೇಬಲ್, ನಾಪೋಕ್ಲು, ಪೊಲೀಸ್ ಠಾಣೆ, ಮಡಿಕೇರಿ, ಕೊಡಗು ಜಿಲ್ಲೆ.
9) ಶ್ರೀ ಮಹದೇವಯ್ಯ, ಪೊಲೀಸ್ ಉಪ ನಿರೀಕ್ಷಕರು, ಸಂಚಾರಿ ನಿಯಂತ್ರಣ ಪೊಲೀಸ್ ಠಾಣೆ, ಮಡಿಕೇರಿ

10) ಶ್ರೀ ಮಹದೇವ ಸ್ವಾಮಿ, ಪೊಲೀಸ್ ಉಪ ನಿರೀಕ್ಷಕರು, ನಾಪೋಕ್ಲು ಪೊಲೀಸ್ ಠಾಣೆ, ಮಡಿಕೇರಿ ವೃತ್ತ, ಕೊಡಗು ಜಿಲ್ಲೆ
11) ಶ್ರೀ ಗೋಪಾಲಕೃಷ್ಣ, ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಪೊಲೀಸ್ ಠಾಣೆ, ಮೈಸೂರು
12) ಶ್ರೀ ಎಂ.ಬಿ. ದಿಲೀಪ್, ಪೊಲೀಸ್ ಕಾನ್ಸ್‌ಟೇಬಲ್, ಮೈಸೂರು ಲೋಕಾಯುಕ್ತ ಪೊಲೀಸ್ ಠಾಣೆ, ಮೈಸೂರು
13) ಶ್ರೀ ಪುಟ್ಟಣ್ಣ, ಪೊಲೀಸ್ ಕಾನ್ಸ್‌ಟೇಬಲ್, ಮೈಸೂರು ಲೋಕಾಯುಕ್ತ ಪೊಲೀಸ್ ಅಧೀಕ್ಷಕರವರ ಕಛೇರಿ, ಮೈಸೂರು
14) ಶ್ರೀ ಪಿ.ಎಂ. ತಿರುಮಲೇಶ್, ಪೊಲೀಸ್ ಕಾನ್ಸ್‌ಟೇಬಲ್, ಮಡಿಕೇರಿ ಲೋಕಾಯುಕ್ತ ಪೊಲೀಸ್, ಮಡಿಕೇರಿ, ಕೊಡಗು ಜಿಲ್ಲೆ
15) ಶ್ರೀ ಎಂ.ಕೆ. ಖಾಲೀದ್, ಪೊಲೀಸ್ ಕಾನ್ಸ್‌ಟೇಬಲ್, ಮಡಿಕೇರಿ ಲೋಕಾಯುಕ್ತ ಪೊಲೀಸ್, ಮಡಿಕೇರಿ, ಕೊಡಗು ಜಿಲ್ಲೆ
16) ಶ್ರೀ ಪಿ.ಪಿ. ಸನ್ನಿ, ಚಾಲಕ, ಮಡಿಕೇರಿ ಲೋಕಾಯುಕ್ತ ಪೊಲೀಸ್, ಮಡಿಕೇರಿ, ಕೊಡಗು ಜಿಲ್ಲೆ
17) ಶ್ರೀ ಎ.ಜೆ. ಲೋಕೇಶ್ ಎ.ಪಿ.ಸಿ. (ಚಾಲಕ)., ಮಡಿಕೇರಿ ಲೋಕಾಯುಕ್ತ ಪೊಲೀಸ್, ಮಡಿಕೇರಿ, ಕೊಡಗು ಜಿಲ್ಲೆ

**ಲಂಚ ಕೇಳಲು ಆಧಾರವಾದ ದಾಖಲೆಗಳು:**

1) ಆಪಾದಿತ ಶ್ರೀ ನಾಗರಾಜು ಇವರನ್ನು ಜೆ.ಎಂ.ಎಫ್.ಸಿ. ನ್ಯಾಯಾಲಯ ಮಡಿಕೇರಿಗೆ ಸಹಾಯಕ ಅಭಿಯೋಜಕ ನಿರ್ದೇಶಕರಾಗಿ ನೇಮಿಸಿದ ಆದೇಶ ಸಂಖ್ಯೆ: ಡಿಪಿಎನ್/ಸಿಶಾ/26/2006–07, ದಿನಾಂಕ 24–4–2007ರ ಪ್ರತಿ
2) ಸಹಾಯಕ ಅಭಿಯೋಜಕ ನಿರ್ದೇಶಕರ ಕಛೇರಿಯಲ್ಲಿ ಇಟ್ಟಿದ್ದ ಹಾಜರಿ ಪುಸ್ತಕದ ದೃಢೀಕೃತ ಪತ್ರದ ಪ್ರತಿ
3) ಮಡಿಕೇರಿಯ ಪ್ರಿನ್ಸಿಪಾಲ್ ಸಿವಿಲ್ ಜಡ್ಜ್ (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ವಿಚಾರಣೆಗೆ ನಿಗದಿಯಾದ ಕೇಸುಗಳ ವಿವರಗಳನ್ನು ಒಳಗೊಂಡ ದೃಢೀಕೃತ ಪತ್ರದ ಪ್ರತಿ.

**ಆಪಾದಿತರ ಸಮಜಾಯಿಷಿ ಹೇಳಿಕೆಗಳು:**

ಶ್ರೀ ನಾಗರಾಜು, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷ ಅಧೀಕ್ಷಕರ ಕಛೇರಿ, ಮಡಿಕೇರಿ (ಹಾಲಿ ಅಮಾನತ್ತಿನಲ್ಲಿರುವ) ಇವರು ದಿನಾಂಕ 22–4–2010ರಂದು ತನಿಖಾಧಿಕಾರಿಗಳಿಗೆ ಸ್ವರಕ್ಷಣಾ ಹೇಳಿಕೆ.

ತನಿಖಾಧಿಕಾರಿಗಳಾದ ಶ್ರೀ ಆರ್.ವಿ. ಗಂಗಾಧರಪ್ಪ, ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಡಿಕೇರಿ, ಕೊಡಗು ಜಿಲ್ಲೆ ಇವರು, ಶ್ರೀ ನಾಗರಾಜು, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರ ಕಛೇರಿ, ಮಡಿಕೇರಿ (ಪ್ರಭಾರ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಿನ್ಸಿಪಾಲ್ ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಡಿಕೇರಿ) ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ, ಮಡಿಕೇರಿ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ 01/2010ರಲ್ಲಿ ಲಂಚ ನಿರೋಧಕ ಕಾಯ್ದೆ 1988ರ ಕಲಂ 7ರ ಅಡಿಯಲ್ಲಿ ಪ್ರಕರಣವನ್ನು ದಾಖಲಿಸಿಕೊಂಡಿರುತ್ತಾರೆ.

ಆಪಾದಿತರಾದ ಶ್ರೀ ನಾಗರಾಜು, ಸಹಾಯಕ ಅಭಿಯೋಗ ನಿರ್ದೇಶಕರು, ಮಡಿಕೇರಿ (ಪ್ರಭಾರ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಿನ್ಸಿಪಾಲ್ ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಡಿಕೇರಿ, ಕೊಡಗು ಜಿಲ್ಲೆ) ಇವರ ವಿರುದ್ಧ ಪಿರ್ಯಾದುದಾರರಾದ ಶ್ರೀ ಪಿ.ಟಿ. ಪೂಣಚ್ಚ ಇವರು ಸ್ನೇಹಿತ ಶ್ರೀ ಎ.ಎಸ್. ಮಂದಣ್ಣ ಯಾನೆ, ವಿಟ್ಟು ರವರ ವಿರುದ್ಧ ಮಡಿಕೇರಿ ಸಿವಿಲ್ ನ್ಯಾಯಾಲಯದಲ್ಲಿ ಸಿ.ಸಿ. ನಂ. 1794/2007ರ ಕ್ರಿಮಿನಲ್ ಕೇಸೂ ನಡೆಯುತ್ತಿದ್ದು ಈ ಕೇಸಿನ ಸಂಬಂಧ ದಿನಾಂಕ 20–4–2010ರಂದು ನಾಪೋಕ್ಲು ಠಾಣೆಯ ಒಬ್ಬ ಪೊಲೀಸ್‌ನವರು ಮಂದಣ್ಣನವರ ಬಳಿಕೆ ಹೋಗಿ ಅವರನ್ನು ಮಡಿಕೇರಿ ಜೆ.ಎಂ.ಎಫ್.ಸಿ. ನ್ಯಾಯಾಲಯದ ಅಭಿಯೋಜಕರಾದ ನಾಗರಾಜುರವರು ತುರ್ತಾಗಿ ಬರಲು ತಿಳಿಸಿದ್ದಾರೆಂದು ಹೇಳಿದ್ದರು. ಈ ಕುರಿತು ವಿಚಾರಿಸಲು ಮಂದಣ್ಣನವರು ತನ್ನ ಸ್ನೇಹಿತ ಪಿರ್ಯಾದಿ ಶ್ರೀ ಪಿ.ಟಿ. ಪೂಣಚ್ಚ ರವರಿಗೆ ತಿಳಿಸಿದ್ದು, ಅದರಂತೆ ಪಿರ್ಯಾದಿಯವರು ದಿನಾಂಕ 21–4–2010ರಂದು ಸದರಿ ಎ.ಪಿ.ಪಿ. ನಾಗರಾಜ ರವರನ್ನು ಭೇಟಿಯಾಗಿ ವಿಚಾರಿಸಿದಾಗ ಅವರು ಈ ಕೇಸಿನ ವಿಚಾರಣೆಯು ದಿನಾಂಕ 22–4–2010ರಂದು ಇದ್ದು, ಈ ಕೇಸಿನಲ್ಲಿ ಮಂದಣ್ಣನವರಿಗೆ ಜಾಮೀನು ಆಗಿರುವುದಿಲ್ಲ. ತಾನು ಅವರಿಗೆ ಜಾಮೀನು ನೀಡಲು ಮತ್ತು ಕೇಸಿನಲ್ಲಿ ನ್ಯಾಯಾಲಯದಲ್ಲಿ ಸಂಪೂರ್ಣವಾಗಿ ಸಹಕರಿಸುವುದಾಗಿ ತಿಳಿಸಿ, ಇದಕ್ಕೆ ಕೂಡಲೇ ` 10,000/– ಅನ್ನು ತಂದುಕೊಡಬೇಕೆಂದು ಕೇಳಿ, ಸದರಿ ಹಣದಲ್ಲಿ ` 6,000/– ತನಗೆ ಮತ್ತು ` 4,000/– ಗಳನ್ನು ಅದೇ ಅಫೀಸಿನಲ್ಲಿ ಇದ್ದ ಸಹಾಯಕ ಸರ್ಕಾರಿ ಅಭಿಯೋಜಕರಾದ ಶ್ರೀಮತಿ ಅಶ್ವಿನಿಯವರಿಗೆ ನೀಡಬೇಕಿದ್ದು, ತಾನು ಇಲ್ಲದ ಅವಧಿಯಲ್ಲಿ ಅವರೂ ತನ್ನ ಪ್ರಭಾರದಲ್ಲಿದ್ದ ಕೇಸಿನಲ್ಲಿ ನಿಮಗೆ ಸಹಕರಿಸುತ್ತಾರೆಂದು ತಿಳಿಸಿದ್ದು, ಪಿರ್ಯಾದುದಾರರು ಅಷ್ಟೊಂದು ಹಣವನ್ನು ಒದಗಿಸಲು ಸಾಧ್ಯವಿಲ್ಲವೆಂದಾಗ ನಾಳೆ ಬೆಳಗ್ಗೆ ಅಂದರೆ ದಿನಾಂಕ 22–4–2010ರಂದು ಮುಂಗಡವಾಗಿ ` 3,000/– ಲಂಚದ ಹಣವನ್ನು ಕೊಡಬೇಕೆಂದು ಒತ್ತಾಯಿಸಿದ್ದು, ಹಣ ಕೊಡದೇ ಇದ್ದಲ್ಲಿ ಜೈಲಿಗೆ ಕಳುಹಿಸುವುದಾಗಿ ಬೆದರಿಕೆ ಹಾಕಿದ್ದರು. ನಂತರ ಪಿರ್ಯಾದುದಾರರು ಈ ಬಗ್ಗೆ ಅವರ ಸ್ನೇಹಿತ ಶ್ರೀ ಮಂದಣ್ಣನವರನ್ನು ವಿಚಾರಿಸಿದಾಗ ಅವರು ಲಂಚದ ಹಣವನ್ನು ಕೊಡಲು ನಿರಾಕರಿಸಿದ್ದು, ಫಿರ್ಯಾದುದಾರರಿಗೂ ಸಹ ಸ್ನೇಹಿತನ ಪರವಾಗಿ ಲಂಚದ ಹಣವನ್ನು ನೀಡಿ ಕೆಲದ ಮಾಡಿಸಿಕೊಳ್ಳಲು ಇಷ್ಟವಿಲ್ಲದ್ದರಿಂದ ಶ್ರೀ ನಾಗರಾಜು ಇವರ ಮೇಲೆ ಕ್ರಮವನ್ನು ಕೈಗೊಳ್ಳುವಂತೆ ಲಂಚ ಕೇಳುತ್ತಿರುವ ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕ ಕಛೇರಿ, ಮಡಿಕೇರಿ (ಪ್ರಭಾರ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಪ್ರಿನ್ಸಿಪಾಲ್ ಜೆ.ಎಂ.ಎಫ್.ಸ. ನ್ಯಾಯಾಲಯ, ಮಡಿಕೇರಿ) ಇವರ ವಿರುದ್ಧ ಆಪಾದನೆ ಮಾಡಿ ಲಿಖಿತ ದೂರನ್ನು ನೀಡಿರುತ್ತಾರೆ. ಸದರಿ ದೂರನ್ನು ದಿನಾಂಕ 22–4–2010ರಂದು ಶ್ರೀ ನಾಗರಾಜು, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರ ಕಛೇರಿ, ಮಡಿಕೇರಿ (ಪ್ರಭಾರ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು) ಇವರ ವಿರುದ್ಧ ದೂರು ದಾಖಲಿಸಿಕೊಂಡು ಬಳಿಕ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ಣ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ 22–4–2010ರಂದು ಮಡಿಕೇರಿ ನ್ಯಾಯಾಲಯದ ಸಂಕೀರ್ಣದ ಆರೋಪಿತರ ಕಛೇರಿಯಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ, ಶ್ರೀ ನಾಗರಾಜು, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕ ಕಛೇರಿ, ಮಡಿಕೇರಿ (ಪ್ರಭಾರ ಹಿರಿಯ ನ್ಯಾಯಾಲಯ, ಮಡಿಕೇರಿ) ಇವರು ಅಕ್ರಮ ಸಂಭಾವನೆಯಾದ ` 3,000/–ಗಳನ್ನು ಫಿರ್ಯಾದುದಾರರಿಂದ ಹಣವನ್ನು ಪಡೆದು ಅದನ್ನು ಎರಡೂ ಕೈಗಳಿಂದ ಎಣಿಸಿ ಅವರು ಧರಿಸಿದ್ದ ಪ್ಯಾಂಟಿನ ಹಿಂಬದಿಯ ಬಲಭಾಗದ ಜೇಬಿನಲ್ಲಿ ಇಟ್ಟುಕೊಂಡರು. ನಂತರ ಆರೋಪಿತರ ಎರಡೂ ಕೈಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ, ಪಿತ್ತಾಫ್ತಿಲಿನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ದೃಢಪಟ್ಟಿರುತ್ತದೆ. ಆಪಾದಿತರ ಪ್ಯಾಂಟಿನ್ ಹಿಂಬದಿಯ ಬಲಭಾಗದ ಜೇಬನ್ನು ಪರಿಶೀಲಿಸಿದಾಗ, ಜೇಬಿನಲ್ಲಿದ್ದ ` 3,000/–ಗಳನ್ನು ವಹಿಸುವಿಕೆ ಪಂಚನಾಮೆಗೆ ತಾಳೆ ಮಾಡಿದಾಗ ಆ ಲಂಚದ ಹಣವು ತಾಳೆ ಹೊಂದಿರುತ್ತದೆ. ಆರೋಪಿತ ಅಧಿಕಾರಿ ಅಕ್ರಮ ಸಂಭಾವನೆ ಪಡೆದ ಸಂದರ್ಭಧಲ್ಲಿ ಪಿರ್ಯಾದಿ ಹಾಗೂ ಆಪಾದಿತ ಸರ್ಕಾರಿ ನೌಕರರ ನಡುವಿನ

ವ್ಯವಹಾರವನ್ನು ನೆರಳು ಸಾಕ್ಷಿಯು ಗಮನಿಸಿ, ಲಂಚನ ಹಣ ಕೇಳಿ ಪಡೆದಿರುವುದನ್ನು ಸಾಕ್ಷಿ ಮಾಡಿರುತ್ತಾರೆ. ಅಕ್ರಮ ಸಂಭಾವನೆಯಾದ ` 3,000/– ಗಳನ್ನು ಶ್ರೀ ನಾಗರಾಜು, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕ ಕಛೇರಿ, ಮಡಿಕೇರಿ (ಪ್ರಭಾರ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಿನ್ಸಿಪಾಲ್ ಸಿವಿಲ್ ಜಡ್ಜ್ (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಡಿಕೇರಿ) ಇವರ ಕಛೇರಿಯಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ 1988ರ ಕಲಂ 7, 13(1)(ಡಿ)ರ ಸಹ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಸರ್ಕಾರಕ್ಕೆ ಮೇಲ್ನೋಟಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಅನ್ವಯ ಕಲಂ 7, 13(1)(ಡಿ) ಸಹ ಕಲಂ 13(2)ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 19(1) (ಬಿ)ರ ಅನ್ವಯ ಮಂಜೂರಾತಿಯನ್ನು ಮಾನ್ಯ ಕರ್ನಾಟಕ ಲೋಕಾಯುಕ್ತರು ಇವರಿಗೆ ನೀಡುವುದು ಅವಶ್ಯ ಎಂದು ಸರ್ಕಾರವು ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತರನ್ನು ಕೆಲಸದಿಂದ ತೆಗೆದುಹಾಕಲು ಅಧಿಕಾರವುಳ್ಳದಾಗಿರುತ್ತದೆ. ಆದ್ದರಿಂದ, ಆಪಾದಿತ ಶ್ರೀ ನಾಗರಾಜು, ಸಹಾಯಕ ಅಭಿಯೋಜಕ ನಿರ್ದೇಶಕರು, ಪ್ರಭಾರ ಸಹಾಯಕ ಸರ್ಕಾರಿ ಅಭಿಯೋಜಕರು, ಆರಕ್ಷಕ ಅಧೀಕ್ಷಕರ ಕಛೇರಿ, ಮಡಿಕೇರಿ, ಕೊಡಗು ಜಿಲ್ಲೆ (ಪ್ರಭಾರ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಿನ್ಸಿಪಾಲ್ ಸಿವಿಲ್ ಜಡ್ಜ್ (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಡಿಕೇರಿ) ಇವರನ್ನು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಅನ್ವಯ ಕಲಂ 7, 13(1)(ಡಿ) ಸಹ ಕಲಂ 13(2)ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 19(1)(ಬಿ)ರ ಅನ್ವಯ ಮಂಜೂರಾತಿಯನ್ನು ನೀಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಅದರಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 338 ಪಿಪಿಇ 2010 (ಭಾಗ–1), ಬೆಂಗಳೂರು ದಿನಾಂಕ 29ನೇ ಏಪ್ರಿಲ್ 2011**

ಶ್ರೀ ನಾಗರಾಜು, ಸಹಾಯಕ ಅಭಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರ ಕಛೇರಿ, ಮಡಿಕೇರಿ (ಪ್ರಭಾರ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಿನ್ಸಿಪಾಲ್ ಸಿವಿಲ್ ಜಡ್ಜ್ (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಡಿಕೇರಿ) (ಹಾಲಿ ಅಮಾನತ್ತಿನಲ್ಲಿರುವವರು) ಇವರನ್ನು ಸರ್ಕಾರಿ ಸೇವೆಯಿಂದ ತೆಗೆದು ಹಾಕುವ ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತ ಶ್ರೀ ನಾಗರಾಜು, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರ ಕಛೇರಿ, ಮಡಿಕೇರಿ (ಪ್ರಭಾರ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಿನ್ಸಿಪಾಲ್ ಸಿವಿಲ್ ಜಡ್ಜ್ (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಡಿಕೇರಿ) ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 19(1)(ಬಿ)ರ ಅನ್ವಯ ಮಂಜೂರಾತಿಯನ್ನು ಕರ್ನಾಟಕ ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡಲಾಗಿದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ) ನಿರ್ವಹಣೆ ನಿಯಮಾವಳಿ 1977ರ ನಿಯಮ 19(1)ರನ್ವಯ ಈ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ 29ನೇ ಏಪ್ರಿಲ್ 2011ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1229 ಒಳಾಡಳಿತ ಇಲಾಖೆ.

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಅಭಿಯೋಗಗಳು)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಸಹ ನಿರ್ದೇಶಕರು (ಮಲೇರಿಯಾ ಮತ್ತು ಫೈಲೇರಿಯಾ), ಉಪ ನಿರ್ದೇಶಕರು,(ಮಲೇರಿಯಾ ಮತ್ತು ಫೈಲೇರಿಯಾ) ಪದನಾಮಗಳನ್ನು ಬದಲಾಯಿಸಿ ಸಹ ನಿರ್ದೇಶಕರು (ಎನ್.ವಿ.ಬಿ.ಡಿ.ಸಿ.ಪಿ), ಉಪನಿರ್ದೇಶಕರು (ಎನ್.ವಿ.ಬಿ.ಡಿ.ಸಿ.ಪಿ), ಎಂದು ಹಾಗೂ ಜಿಲ್ಲಾ ಮಲೇರಿಯಾ ಅಧಿಕಾರಿಗಳ ಪದನಾಮವನ್ನು ಜಿಲ್ಲಾ ರೋಗವಾಹಕ ಆಶ್ರಿತ ರೋಗಗಳ ನಿಯಂತ್ರಣಾಧಿಕಾರಿಗಳು ಎಂದು ಮರು ಪದನಾಮಗೊಳಿಸುವ ಬಗ್ಗೆ.

**ಓದಲಾಗಿದೆ: 1.** ಸರ್ಕಾರದ ಆದೇಶ ಸಂಖ್ಯೆ:ಆಕುಕ 573 ಪಿಪಿಎಸ್ 76(ಪಿ), ದಿನಾಂಕ:29–09–1980.

**2.** ಆಯುಕ್ತರು, ಆಕುಕ ಸೇವೆಗಳು, ಆನಂದರಾವ್ ವೃತ್ತ, ಬೆಂಗಳುರು ಇವರ ಪತ್ರ ಸಂಖ್ಯೆ: ಎನ್‌ವಿಟಿಡಿಸಿಪಿ/ಇಎಸ್‌ಟಿ/ 40/ 2010–11, ದಿನಾಂಕ:27–12–2010.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ (1)ರ ಸರ್ಕಾರದ ಆದೇಶದಲ್ಲಿ, ರಾಷ್ಟ್ರೀಯ ಮಲೇರಿಯಾ ನಿರ್ಮೂಲನಾ ಕಾರ್ಯಕ್ರಮದಡಿಯಲ್ಲಿ ಭಾರತ ಸರ್ಕಾರದ ಮಾರ್ಗದರ್ಶನದಂತೆ ಮಂಜೂರು ಮಾಡಲಾದ ಹುದ್ದೆಗಳನ್ನು ರಾಜ್ಯ ಮಟ್ಟದಲ್ಲಿ ಸಹ ನಿರ್ದೇಶಕರು(ಮಲೇರಿಯಾ ಮತ್ತು ಫೈಲೇರಿಯಾ), ಉಪ ನಿರ್ದೇಶಕರು(ಮಲೇರಿಯಾ ಮತ್ತು ಫೈಲೇರಿಯಾ) ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಮಲೇರಿಯಾ ಅಧಿಕಾರಿಗಳು ಎಂದು ಪದನಾಮೀಕರಣಗೊಳಿಸಿದೆ.

ಮೇಲೆ ಓದಲಾದ ಉಲ್ಲೇಖ(2)ರ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಭಾರತ ಸರ್ಕಾರವು 2003ನೇ ಸಾಲಿನಿಂದ ರೋಗವಾಹಕದಿಂದ ಹರಡುವ ರೋಗಗಳಾದ ಮಲೇರಿಯಾ, ಡೆಂಗಿ ಜ್ವರ, ಚಿಕನ್ ಗುನ್ಯ, ಆನೆಕಾಲು ರೋಗ, ಕಾಲರಾ ಅಟ್ಯಾಕ್ ಮತ್ತು ಮಿದುಳು ಜ್ವರದ ರೋಗಗಳನ್ನು ಒಂದೇ ಪತಾಕೆಯಡಿಯಲ್ಲಿ ತಂದಿದ್ದು ಈ ಕಾರ್ಯಕ್ರಮವನ್ನು ರಾಷ್ಟ್ರೀಯ ರೋಗವಾಹಕ

ಆಶ್ರಿತ ರೋಗಗಳ ನಿಯಂತ್ರಣ ಕಾರ್ಯಕ್ರಮ (National Vector Borne Disease Control Programme) ಎಂದು ಪದನಾಮೀಕರಿಸಲಾಗಿದೆ. ಸದರಿ ಕಾರ್ಯಕ್ರಮದ ಸಮಗ್ರ ಹಿತದೃಷ್ಟಿಯಿಂದ ಹಾಗೂ ಕಾರ್ಯಕ್ರಮದ ಸುಗಮ ಅನುಷ್ಠಾನಕ್ಕಾಗಿ ಈ ಕೆಳಕಂಡಂತೆ ಪದನಾಮೀಕರಿಸುವಂತೆ ಕೋರಿರುತ್ತಾರೆ.

| ಕ್ರ. ಸಂ. | ಈಗಿರುವ ಪದನಾಮ | ಮರುಪದನಾಮೀಕರಿಸಬೇಕಾದ ಹುದ್ದೆಯ ಹೆಸರು | ಕಾರ್ಯ ನಿರ್ವಹಿಸುತ್ತಿರುವ ಸ್ಥಳ |
|---|---|---|---|
| 1. | ಸಹ ನಿದೇಶಕರು (ಮಲೇರಿಯ ಮತ್ತು ಫೈಲೇರಿಯ)<br>Joint Director (Maleria & Filaria) | ಸಹ ನಿರ್ದೇಶಕರು (ಎನ್.ವಿ.ಬಿ.ಡಿ.ಸಿ.ಪಿ)<br>Joint Director (NVBDCP) | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು. |
| 2. | ಉಪ ನಿರ್ದೇಶಕರು (ಮಲೇರಿಯ ಮತ್ತು ಫೈಲೇರಿಯ)<br>Deputy Director (Maleria & Filaria) | ಉಪ ನಿರ್ದೇಶಕರು (ಎನ್.ವಿ.ಬಿ.ಡಿ.ಸಿ.ಪಿ)<br>Deputy Director (NVBDCP) | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು. |
| 3. | ಜಿಲ್ಲಾ ಮಲೇರಿಯಾ ಅಧಿಕಾರಿಗಳು.<br>District Malaria Officer (DMO) | ಜಿಲ್ಲಾ ರೋಗವಾಹಕ ಅಶ್ರಿತ ರೋಗಗಳ ನಿಯಂತ್ರಣಾಧಿಕಾರಿಗಳು.<br>District Vector Borne Disease Control Officer(DVBDCO) | ಕೊಡಗು ಜಿಲ್ಲೆಯನ್ನು ಹೊರತುಪಡಿಸಿ ಉಳಿದ 29 ಜಿಲ್ಲೆಗಳಲ್ಲಿ. |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 21 ಎಪ್‌ಪಿಇ 2011, ಬೆಂಗಳೂರು, ದಿನಾಂಕ: 23–04–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ರೋಗವಾಹಕ ಆಶ್ರಿತ ರೋಗಗಳ ನಿಯಂತ್ರಣ ಕಾರ್ಯಕ್ರಮದ ಸಮಗ್ರ ಹಿತದೃಷ್ಟಿಯಿಂದ ಈ ಕೆಳಗಿನ ಹುದ್ದೆಗಳನ್ನು ಈ ಕೆಳಕಂಡಂತೆ ಮರು ಪದನಾಮೀಕರಿಸಿದೆ.

| ಕ್ರ. ಸಂ. | ಈಗಿರುವ ಪದನಾಮ | ಮರುಪದನಾಮೀಕರಿಸಿರುವ ಹುದ್ದೆಯ ಹೆಸರು | ಕಾರ್ಯ ನಿರ್ವಹಿಸುತ್ತಿರುವ ಸ್ಥಳ |
|---|---|---|---|
| 1. | ಸಹ ನಿದೇಶಕರು (ಮಲೇರಿಯ ಮತ್ತು ಫೈಲೇರಿಯ)<br>Joint Director (Maleria & Filaria) | ಸಹ ನಿರ್ದೇಶಕರು (ಎನ್.ವಿ.ಬಿ.ಡಿ.ಸಿ.ಪಿ)<br>Joint Director (NVBDCP) | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವಗಳ ನಿರ್ದೇಶನಾಲಯ,ಬೆಂಗಳೂರು. |
| 2. | ಉಪ ನಿರ್ದೇಶಕರು (ಮಲೇರಿಯ ಮತ್ತು ಫೈಲೇರಿಯ)<br>Deputy Director (Maleria & Filaria) | ಉಪ ನಿರ್ದೇಶಕರು (ಎನ್.ವಿ.ಬಿ.ಡಿ.ಸಿ.ಪಿ)<br>Deputy Director (NVBDCP) | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವಗಳ ನಿರ್ದೇಶನಾಲಯ, ಬೆಂಗಳೂರು. |
| 3. | ಜಿಲ್ಲಾ ಮಲೇರಿಯಾ ಅಧಿಕಾರಿಗಳು.<br>District Malaria Officer (DMO) | ಜಿಲ್ಲಾ ರೋಗವಾಹಕ ಅಶ್ರಿತ ರೋಗಗಳ ನಿಯಂತ್ರಣಾಧಿಕಾರಿಗಳು.<br>District Vector Borne Disease Control Officer (DVBDCO) | ಕೊಡಗು ಜಿಲ್ಲೆಯನ್ನು ಹೊರತುಪಡಿಸಿ ಉಳಿದ 29 ಜಿಲ್ಲೆಗಳಲ್ಲಿ. |

ಮೇಲೆ ಮರು ಪದನಾಮೀಕರಿಸಿದ ಹುದ್ದೆಗಳ ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ. ಈ ಆದೇಶವು ಸದರಿ ಹುದ್ದೆಗಳ ವೇತನ ಶ್ರೇಣಿಯಲ್ಲಿ ಯಾವುದೇ ವ್ಯತ್ಯಾಸಗೊಳಿಸದಿರುವ ಹಾಗೂ ಯಾವುದೇ ಹೆಚ್ಚಿನ ವೇತನ ಶ್ರೇಣಿ ಕೋರಿ ಪ್ರಸ್ತಾವನೆ ಸಲ್ಲಿಸಬಾರದೆಂಬ ಷರತ್ತಿಗೆ ಒಳಪಟ್ಟಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ. ಹೇಮನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಅನುಬಂಧ

**1. ಸಹ ನಿರ್ದೇಶಕರು (ಎನ್.ವಿ.ಬಿ.ಡಿ.ಸಿ.ಪಿ) ಇವರ ಕರ್ತವ್ಯ ಮತ್ತು ಜವಾಬ್ದಾರಿಗಳು**

1. ಸಹ ನಿರ್ದೇಶಕರು (ಎನ್.ವಿ.ಬಿ.ಡಿ.ಸಿ.ಪಿ) ಇವರು ರಾಷ್ಟ್ರೀಯ ರೋಗವಾಹಕ ಆಶ್ರಿತ ರೋಗಗಳ ನಿಯಂತ್ರಣ ಕಾರ್ಯಕ್ರಮಕ್ಕಾಗಿ ರಾಜ್ಯ ಮಟ್ಟದ ಕಾರ್ಯಕ್ರಮಾಧಿಕಾರಿಗಳಾಗಿರುತ್ತಾರೆ.
2. ಭಾರತ ಸರ್ಕಾರದಿಂದ ಈ ಕಾರ್ಯಕ್ರಮಕ್ಕಾಗಿ ಹೊರಡಿಸಲಾದ ಮಾರ್ಗದರ್ಶಿ ಹಾಗೂ ಅನುಷ್ಠಾನ ಕ್ರಮಗಳಂತೆ ರಾಜ್ಯಾದ್ಯಂತ ಮಲೇರಿಯ, ಆನೆಕಾಲು ರೋಗ, ಡೆಂಗಿಜ್ವರ, ಚಿಕುಂಗುನ್ಯ ಮತ್ತು ಮದುಳುಜ್ವರ ರೋಗಗಳ ನಿಯಂತ್ರಣದ ಸಂಪೂರ್ಣ ಜವಾಬ್ದಾರಿಯನ್ನು ಹೊಂದಿರುವುದು.
3. ಈ ಕಾರ್ಯಕ್ರಮದ ಅನುಷ್ಠಾನಕ್ಕಾಗಿ ರಾಜ್ಯ ಸರ್ಕಾರದ ಪರವಾಗಿ ಹಾಗೂ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ಪರವಾಗಿ ಸಂಬಂಧಪಟ್ಟ ಎಲ್ಲಾ ಸುತ್ತೋಲೆ, ಮಾರ್ಗದರ್ಶನ ಹಾಗೂ ಪತ್ರ ವ್ಯವಹಾರಗಳನ್ನು ತಮ್ಮ ಅಧೀನ ಕಛೇರಿಗಳ ಅಧಿಕಾರಿಗಳೊಡನೆ ನಡೆಸತಕ್ಕದ್ದು ಹಾಗೂ ಕಾರ್ಯಕ್ರಮಕ್ಕೆ ಸಂಬಂಧಪಟ್ಟಂತೆ ಆಡಳಿತಾತ್ಮಕ ನಿರ್ದೇಶನಗಳನ್ನು ನೀಡತಕ್ಕದ್ದು.

4. ಎನ್.ವಿ.ಬಿ.ಡಿ.ಸಿ.ಪಿ. ಕಾರ್ಯಕ್ರಮಕ್ಕೆ ಸಂಬಂಧಿಸಿದಂತೆ ತಾಂತ್ರಿಕ ಸಲಹೆ ಸೂಚನೆಗಳು ಮತ್ತು ರೋಗ ಉಲ್ಬಣಾವಸ್ಥೆಯ ನಿರ್ವಹಣೆಗೆ ಸಂಬಂಧಿಸಿದ ನಿರ್ಧಾರಗಳನ್ನು ಕೈಗೊಳ್ಳುವುದು.
5. ರಾಜ್ಯದಲ್ಲಿ ಕಾರ್ಯಕ್ರಮದ ಸುಗಮ ಮತ್ತು ಸಂಪೂರ್ಣ ನಿರ್ವಹಣೆಗೆ ಸಂಬಂಧಪಟ್ಟ ತಾಂತ್ರಿಕ ವಿಚಾರ ವಿನಿಮಯ, ಸಲಹೆ ಹಾಗೂ ಇತರೆ ಪತ್ರ ವ್ಯವಹಾರಗಳನ್ನು ಭಾರತ ಸರ್ಕಾರದ ಅಧಿಕಾರಿಗಳೊಡನೆ ನಡೆಸತಕ್ಕದ್ದು.
6. ಎನ್.ವಿ.ಬಿ.ಡಿ.ಸಿ.ಪಿ. ಕಾರ್ಯಕ್ರಮದ ಸುಗಮ ಅನುಷ್ಠಾನಕ್ಕಾಗಿ ಯೋಜನೆ ಮತ್ತು ಚಟುವಟಿಕೆಗಳ ನಿಗದಿತ ವೇಳಾಪಟ್ಟಿ ತಯಾರಿಕೆ, ಕಾರ್ಯಕ್ರಮದ ನಿರ್ವಹಣಾ ಆಯವ್ಯಯ ಮುಂಗಡ ಪತ್ರ ತಯಾರಿಸಿ ಸಲ್ಲಿಸುವುದು ಮತ್ತು ಅವುಗಳ ಸೂಕ್ತ ಅನುಷ್ಠಾನದ ಜವಾಬ್ದಾರಿ ವಹಿಸತಕ್ಕದ್ದು.
7. ತಮ್ಮ ಅಧೀನ ಅಧಿಕಾರಿಗಳ ಮತ್ತು ಕಛೇರಿಗಳ ದೈನಂದಿನ, ಸಪ್ತಾಹಿಕ ಹಾಗೂ ಮಾಸಿಕ ಚಟುವಟಿಕೆಗಳ ಮೇಲೆ ಸದಾಕಾಲ ನಿಗಾವಹಿಸುವುದು ಹಾಗೂ ಕಾರ್ಯಕ್ರಮದ ಮೇಲ್ವಿಚಾರಣೆ, ನಿರೀಕ್ಷಣೆ ಮತ್ತು ಮೌಲ್ಯಮಾಪನವನ್ನು ತಮ್ಮ ರಾಜ್ಯಮಟ್ಟದ ಅಧೀನ ಅಧಿಕಾರಿ ಹಾಗೂ ಸಿಬ್ಬಂದಿ ವರ್ಗದ ಮೂಲಕ ನಿರ್ವಹಿಸುವುದು.
8. ಕಾರ್ಯಕ್ರಮದ ಗುಣಮಟ್ಟವನ್ನು ಹೆಚ್ಚಿಸಲು ಅವಶ್ಯವಾದ ತರಬೇತಿ, ಕಾರ್ಯಾಗಾರಗಳು ಮತ್ತು ವಿವಿಧ ಮಟ್ಟದ ಸಭೆಗಳನ್ನು ಕರೆದು ಸೂಕ್ತ ಸಲಹೆ ಸೂಚನೆಗಳನ್ನು ನೀಡತಕ್ಕದ್ದು.
9. ರಾಜ್ಯಾದ್ಯಂತ ಕನಿಷ್ಠ ತಿಂಗಳಲ್ಲಿ 10 ದಿನಗಳು ವಿವಿಧ ಜಿಲ್ಲೆಗಳ ಪ್ರವಾಸ ಕೈಗೊಂಡು, ಈ ರೋಗ ನಿಯಂತ್ರಣ ಚಟುವಟಿಕೆಗಳ ಕಾರ್ಯಕ್ರಮಗಳ ಮೇಲ್ವಿಚಾರಣೆ ಹಾಗೂ ನಿರೀಕ್ಷಣೆ ಮಾಡತಕ್ಕದ್ದು.
10. ಜಿಲ್ಲಾ ರೋಗವಾಹಕ ಆಶ್ರಿತ ರೋಗಗಳ ನಿಯಂತ್ರಣಾಧಿಗಳಿಂದ ವರದಿಗಳನ್ನು ನಿಯಮಿತವಾಗಿ ತರಿಸಿ, ಪರಿಶೀಲನೆ ನಡೆಸಿ ಅದರಂತೆ ಅಗತ್ಯವಾದ ಮಾರ್ಗದರ್ಶನವನ್ನು ಆಯಾ ಜಿಲ್ಲಾ ಮಟ್ಟದ ಅಧಿಕಾರಿಗಳಿಗೆ ನೀಡತಕ್ಕದ್ದು ಹಾಗೂ ಈ ವರದಿಗಳ ಆಧಾರದ ಮೇಲೆ ಮುಂದಿನ ಕಾರ್ಯತಂತ್ರವನ್ನು ರೂಪಿಸುವುದು.
11. ಕಾರ್ಯಕ್ರಮಕ್ಕೆ ಬೇಕಾದ ಔಷದೋಪಚಾರಗಳು, ಸಾಮಾಗ್ರಿ, ಸಾದನ ಸಲಕರಣೆಗಳು, ಕೀಟನಾಶಕಗಳು ಮುಂತಾದ ವಿಕೇಂದ್ರಿಕೃತ ದಾಸ್ತಾನುಗಳನ್ನು ಅಂದಾಜು ಮಾಡಿ ಇವುಗಳ ಸಕಾಲಿಕ ಸರಬರಾಜಿಗೆ ವ್ಯವಸ್ಥೆಗೊಳಿಸುವುದು. ಭಾರತ ಸರ್ಕಾರದಿಂದ ಬರಬೇಕಾದ ಕೇಂದ್ರೀಕೃತ ಸಾಮಾಗ್ರಿಗಳು ರಾಜ್ಯಕ್ಕೆ ಸಕಾಲದಲ್ಲಿ ಲಭ್ಯವಾಗುವಂತೆ ಕ್ರಮಕೈಗೊಳ್ಳುವುದು.
12. ಭಾರತ ಸರ್ಕಾರದಿಂದ ಬರಬೇಕಾದ ನಗದು ಅನುದಾನವನ್ನು ಪಡೆಯಲು ಬೇಕಾದ ಎಲ್ಲಾ ಕ್ರಮಗಳನ್ನು ಕೈಗೊಳ್ಳುವುದು ಹಾಗೂ ಅಧೀನ ಕಛೇರಿಗಳಿಗೆ ಬಿಡುಗಡೆ ಮಾಡಬೇಕಾದ ನಗದು ಹಾಗೂ ಇತರ ಸಂಬಂಧಪಟ್ಟ ಆಯವ್ಯಯ / ಅನುದಾನಗಳನ್ನು ಸಕಾಲದಲ್ಲಿ ಬಿಡುಗಡೆಗೊಳ್ಳುವಂತೆ ಅನುಪಾಲನ ಕ್ರಮಕೈಗೊಳ್ಳುವುದು. ಬಿಡುಗಡೆಯಾದ ಅನುದಾನದ ಸೂಕ್ತ ಬಳಕೆಯ ಜವಾಬ್ದಾರಿ ಹೊಂದಿರುವುದು.
13. ಎನ್.ವಿ.ಬಿ.ಡಿ.ಸಿ.ಪಿ. ಕಾರ್ಯಕ್ರಮಕ್ಕೆ ಸಂಬಂಧಪಟ್ಟ ಹಾಗೂ ಕಾಲಕಾಲಕ್ಕೆ ಮೇಲಾಧಿಕಾರಿಗಳು ವಹಿಸಬಹುದಾದ ಕರ್ತವ್ಯಗಳ ನಿರ್ವಹಣೆಯ ಜವಾಬ್ದಾರಿಯನ್ನು ಹೊರತಕ್ಕದ್ದು.
14. ಒಟ್ಟಾರೆ ರಾಜ್ಯದಲ್ಲಿ ಮಲೇರಿಯ, ಡೆಂಗಿಜ್ವರ, ಚಿಕುಂಗುನ್ಯ, ಮೆದುಳುಜ್ವರ ಮತ್ತು ಆನೆಕಾಲು ರೋಗಗಳ ನಿಯಂತ್ರಣಕ್ಕಾಗಿ ಬೇಕಾದ ಎಲ್ಲಾ ತಾಂತ್ರಿಕ, ಆಡಳಿತಾತ್ಮಕ ಹಾಗೂ ಆರ್ಥಿಕ ಅವಶ್ಯಕತೆಗಳನ್ನು ಪೂರೈಸುವ ಸಂಪೂರ್ಣ ಜವಾಬ್ದಾರಿ ವಹಿಸಿಕೊಳ್ಳತಕ್ಕದ್ದು.

**2. ಉಪ ನಿರ್ದೇಶಕರು (ಎನ್.ವಿ.ಬಿ.ಡಿ.ಸಿ.ಪಿ) ಇವರ ಕರ್ತವ್ಯ ಮತ್ತು ಜವಾಬ್ದಾರಿಗಳು:**

1. ಇವರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದಲ್ಲಿ ಸಹ ನಿರ್ದೇಶಕರು (ಎನ್.ವಿ.ಬಿ.ಡಿ.ಸಿ.ಪಿ) ಇವರಿಗೆ ರಾಷ್ಟ್ರೀಯ ರೋಗವಾಹಕ ಆಶ್ರಿತ ರೋಗಗಳ ನಿಯಂತ್ರಣ ಕಾರ್ಯಕ್ರಮದ ಅನುಷ್ಠಾನಕ್ಕೆ ಸಹಾಯಕರಾಗಿ ಕಾರ್ಯನಿರ್ವಹಿಸತಕ್ಕದ್ದು.
2. ಮಲೇರಿಯ, ಆನೇಕಾಲುರೋಗ, ಡೆಂಗಿಜ್ವರ, ಚಿಕುಂಗುನ್ಯ, ಕಾಲ ಅಜಾರ್ ಮತ್ತು ಮೆದುಳುಜ್ವರ ಮುಂತಾದ ಸೊಳ್ಳೆಗಳಿಂದ ಹರಡುವ ರೋಗಗಳ ಸಮೀಕ್ಷಾ ಕಾರ್ಯ, ಪ್ರಯೋಗಶಾಲಾ ಗುಣಮಟ್ಟ ನಿರ್ವಹಣೆ, ಚಿಕಿತ್ಸಾ ವಿದಿವಿಧಾನಗಳು, ತುರ್ತು ಸಂದರ್ಭ ನಿರ್ವಹಣೆ, ಕೀಟನಾಶಕ ಸಿಂಪಡಣಾ ಕಾರ್ಯದ ಮೇಲ್ವಿಚಾರಣೆ ಹಾಗೂ ಪರಿವೀಕ್ಷಣೆ, ನಗರ ಮಲೇರಿಯ ಯೋಜನೆ ಕಾರ್ಯನಿರ್ವಹಣೆ ಹಾಗೂ ಸಹಾಯಧನ ಬಿಲ್ಲುಗಳ ಪರಿಶೀಲನೆ, ಸರ್ಕಾರಕ್ಕೆ ಕಳುಹಿಸಬಹುದಾದ ಪ್ರಸ್ತಾವನೆಗಳ ತಯಾರಿ ಮುಂತಾದ ಕಾರ್ಯಗಳನಿರ್ವಹಣಾ ಜವಾಬ್ದಾರಿ.
3. ಅಧೀನ ಕಾರ್ಯಾಲಯಗಳಿಂದ ಸಲ್ಲಿಸಲಾದ ದೈನಂದಿನ, ವಾರದ ಮತ್ತು ಮಾಸಿಕ ವರದಿಗಳನ್ನು ಪರಿಶೀಲಿಸುವುದು ಹಾಗೂ ಸೂಕ್ತ ಮಾರ್ಗದರ್ಶನ ನೀಡುವುದು. ವಾರ್ಷಿಕ ವರದಿಗಳನ್ನು ತಯಾರಿಸಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಮೇಲಾಧಿಕಾರಿಗಳಿಗೆ ಸಲ್ಲಿಸುವುದು.
4. ಭಾರತ ಸರ್ಕಾರದಿಂದ ಬರಬೇಕಾದ ಸವಲತ್ತುಗಳು, ರಾಜ್ಯ ಸರ್ಕಾರದಿಂದ ಆಗಬೇಕಾದ ಮಂಜೂರಾತಿಗಳು, ಕಾರ್ಯಕ್ರಮದಲ್ಲಿ ಉಂಟಾಗಬಹುದಾದ ಮಾರ್ಪಾಡುಗಳು, ಮಾರ್ಗದರ್ಶನಗಳು ಮುಂತಾದ ಎಲ್ಲಾ ಆಡಳಿತಾತ್ಮಕ ವಿಚಾರಗಳಲ್ಲಿ ನಿರ್ದೇಶಕರು ಹಾಗೂ ಸಹ ನಿರ್ದೇಶಕರು (ಎನ್.ವಿ.ಬಿ.ಡಿ.ಸಿ.ಪಿ) ಇವರೊಡನೆ ಸಹಕರಿಸಿ ಅನುಪಾಲನಾ ಕ್ರಮ ಕೈಗೊಳ್ಳುವುದು.
5. ಕ್ಷೇತ್ರ ಕಾರ್ಯ ನಿರ್ವಹಣೆಗಾಗಿ ರೋಗ ಉಲ್ಬಣಗೊಂಡ ಪ್ರದೇಶಗಳಿಗೆ ತಕ್ಷಣ ಭೇಟಿ ನೀಡಿ ಅವುಗಳ ನಿಯಂತ್ರಣಕ್ಕೆ ಬೇಕಾದ ತುರ್ತು ಕ್ರಮಗಳನ್ನು ನಿರ್ವಹಿಸಿ ಬಾಧಿತ ಪ್ರದೇಶದಲ್ಲಿ ರೋಗವು ನಿಯಂತ್ರಣಕ್ಕೆ ಬರುವವರೆಗೆ ಸ್ಥಳದಲ್ಲಿ ವಾಸ್ತವ್ಯ ಹೂಡುವುದು ಹಾಗೂ ಕಾಲಕಾಲಕ್ಕೆ ವರದಿಯನ್ನು ಮೇಲಾಧಿಕಾರಿಗಳಿಗೆ ಸಲ್ಲಿಸುವುದು. ಸಾಮಾನ್ಯ ಸಂದರ್ಭಗಳಲ್ಲಿ ಪ್ರತಿ ತಿಂಗಳೂ ಕನಿಷ್ಠ 10 ದಿನಗಳ ಪ್ರವಾಸ ಕೈಗೊಂಡು ಸಮಸ್ಯಾತ್ಮಕ ಪ್ರದೇಶಗಳ ಭೇಟಿ ನೀಡಿ ನಿಯಂತ್ರಣ ಕಾರ್ಯ ಚಟುವಟಿಕೆಗಳ ಪರಿಶೀಲನೆ ಮತ್ತು ಸೂಕ್ತ ಮಾರ್ಗದರ್ಶನ ನೀಡುವುದು.
6. ತರಬೇತಿ ಶಿಬಿರಗಳು, ಕಾರ್ಯಾಗಾರಗಳು ಮತ್ತು ಅಧಿಕಾರಿ / ಸಿಬ್ಬಂದಿ ಸಭೆಗಳನ್ನು ಆಯೋಜಿಸುವುದು ಮತ್ತು ವರದಿಗಳನ್ನು ತಯಾರಿಸುವುದು.

7. ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಹಾಗೂ ಸಹ ನಿರ್ದೇಶಕರು (ಎನ್.ವಿ.ಬಿ.ಡಿ.ಸಿ.ಪಿ) ಇವರ ಸೂಚನೆ ಮೇರೆಗೆ ಕಾರ್ಯಕ್ರಮಕ್ಕೆ ಸಂಬಂಧಪಟ್ಟ ಇತರೆ ಕರ್ತವ್ಯಗಳ ನಿರ್ವಹಣೆ.

**3. ಜಿಲ್ಲಾ ರೋಗವಾಹಕ ಆಶ್ರಿತ ರೋಗಗಳ ನಿಯಂತ್ರಣಾಧಿಕಾರಿಗಳ ಕರ್ತವ್ಯ ಮತ್ತು ಜವಾಬ್ದಾರಿಗಳು**

1. ರೋಗವಾಹಕ ರೋಗಗಳಾದ ಮಲೇರಿಯಾ, ಡೆಂಗಿ, ಚಿಕುಂಗುನ್ಯ, ಮೆದುಳು ಜ್ವರ, ಆನೆಕಾಲು ರೋಗ ಇತ್ಯಾದಿಗಳ ಎಲ್ಲಾ ನಿಯಂತ್ರಣ ಚಟುವಟಿಕೆಗಳ ಸಂಪೂರ್ಣ ಜವಾಬ್ದಾರಿ.
2. ತಮ್ಮ ಕಾರ್ಯವ್ಯಾಪ್ತಿಯಲ್ಲಿ ಬರುವ ಎಲ್ಲಾ ಚಟುವಟಿಕೆಗಳ ಬಗ್ಗೆ ಸಮಗ್ರ ತಿಳುವಳಿಕೆ ಹೊಂದಿರುವುದೇ ಅಲ್ಲದೆ, ತಮ್ಮ ಬಳಿ ಲಭ್ಯವಿರುವ ರೋಗವಾಹಕ ರೋಗಗಳ ಅಂಕಿ ಅಂಶಗಳನ್ನು ಆಧರಿಸಿ ಈ ರೋಗಗಳ ಸ್ಥಿತಿಗತಿಯ (Epidemiology) ಬಗ್ಗೆ ಸಂಪೂರ್ಣ ತಜ್ಞತೆ ಹೊಂದಿರುವುದು.
3. ಇವರುಗಳ ಮುಖ್ಯವಾದ ಕಾರ್ಯವು ಕ್ಷೇತ್ರ ಚಟುವಟಿಕೆಗಳಿಗೆ ಸಂಬಂಧಿಸಿದ್ದು, ಸಾಮಾನ್ಯ ಸಂದರ್ಭಗಳಲ್ಲಿ ತಿಂಗಳಲ್ಲಿ ಕನಿಷ್ಠ 15 ದಿನಗಳು ತಮ್ಮ ಜಿಲ್ಲೆಯಲ್ಲಿ ಪ್ರವಾಸ ಕೈಗೊಳ್ಳಬೇಕಾಗಿರುತ್ತದೆ. ಈ 15 ದಿನಗಳಲ್ಲಿ 8 ರಾತ್ರಿ ವಾಸ್ತವ್ಯ ಮಾಡಬೇಕಾಗಿರುತ್ತದೆ. ತುರ್ತು ಸಂದರ್ಭಗಳಲ್ಲಿ ಇದಕ್ಕೂ ಹೆಚ್ಚಿನ ಪ್ರವಾಸ ಕೈಗೊಳ್ಳುವುದು.
4. ಜಿಲ್ಲಾ ಆರೋಗ್ಯ ಮತ್ತು ಕು.ಕ. ಅಧಿಕಾರಿಗಳ ಮೂಲಕ ಮಂಜೂರು ಮಾಡಿಸಿದ ತಮ್ಮ ಮುಂಗಡ ಪ್ರವಾಸ ಪಟ್ಟಿ, ಪ್ರವಾಸದ ನಂತರ ಪ್ರವಾಸದ ವರದಿಯನ್ನು ವಲಯ ಉಪ ನಿರ್ದೇಶಕರು ಹಾಗೂ ರಾಜ್ಯ ಮಟ್ಟದ ಕಾರ್ಯಕ್ರಮಾಧಿಕಾರಿಗಳಿಗೆ ಸಲ್ಲಿಸಬೇಕಾಗಿರುತ್ತದೆ.
5. ಸಂಬಂಧಪಟ್ಟ ಪ್ರಾಥಮಿಕ ಆರೋಗ್ಯ ಕೇಂದ್ರಗಳು ಹಾಗೂ ಇತರೆ ಅಂಗ ಸಂಸ್ಥೆಗಳಿಂದ ದಿನವಹಿ, ವಾರದ ಮತ್ತು ಮಾಸಿಕ ವರದಿಗಳನ್ನು ಸಂಗ್ರಹಿಸಿ ಇವುಗಳ ಕ್ರೋಢೀಕೃತ ವರದಿಗಳನ್ನು ಜಿಲ್ಲಾ ಆರೋಗ್ಯ ಮತ್ತು ಕು.ಕ. ಅಧಿಕಾರಿಗಳು ವಲಯ ಉಪ ನಿರ್ದೇಶಕರು ಹಾಗೂ ರಾಜ್ಯ ಮಟ್ಟದ ಕಾರ್ಯಕ್ರಮಾಧಿಕಾರಿಗಳಿಗೆ ಸೂಕ್ತ ಕಾಲಕ್ಕೆ ಸಲ್ಲಿಸತಕ್ಕದ್ದು.
6. ಕಾರ್ಯಕ್ರಮದ ಅಡಿಯಲ್ಲಿ ಕಾಲಕಾಲಕ್ಕೆ ಹೊರಡಿಸುವ ನವೀನ ರೂಪುರೇಷೆಗಳು ಮತ್ತು ಮಾರ್ಗದರ್ಶಿಗಳನ್ನು ಅನುಷ್ಠಾನಗೊಳಿಸುವುದು ಹಾಗೂ ಅಗತ್ಯವಿದ್ದಲ್ಲಿ ಜಿಲ್ಲಾ ಆರೋಗ್ಯ ಮತ್ತು ಕು.ಕ. ಅಧಿಕಾರಿಗಳು ಮತ್ತು ರಾಜ್ಯ ಮಟ್ಟದ ಕಾರ್ಯಕ್ರಮಾಧಿಕಾರಿಗಳು ಇವರುಗಳಿಂದ ಇದರ ಬಗ್ಗೆ ಅಗತ್ಯ ಸಲಹೆ, ಸೂಚನೆ ಮತ್ತು ನೆರವು ಪಡೆದುಕೊಳ್ಳುವುದು.
7. ತಮ್ಮ ಕ್ಷೇತ್ರದಲ್ಲಿ ಕಾರ್ಯಕ್ರಮದ ಅಡಿಯಲ್ಲಿ ನಡೆಯುವ ವಿವಿಧ ಕಾರ್ಯ ಚಟುವಟಿಕೆಗಳನ್ನು ಆಗಿಂದಾಗ್ಗೆ ಖುದ್ದು ತಪಾಸಣೆ ನಡೆಸಿ, ಲೋಪದೋಷಗಳು, ಕಂಡು ಬಂದರೆ ಸರಿಪಡಿಸುವುದು ಮತ್ತು ತಪ್ಪಿತಸ್ಥರ ಮೇಲೆ ಶಿಸ್ತು ಕ್ರಮಕೈಗೊಳ್ಳುವಂತೆ ಮೇಲಾಧಿಕಾರಿಗಳಿಗೆ ವರದಿ ಮಾಡುವುದು.
8. ಕಾರ್ಯಕ್ರಮದ ಅಡಿಯಲ್ಲಿ ಒದಗಿಸುವ ಮಲೇರಿಯ ನಿರೋಧಕ ಔಷಧಿಗಳು, ಗಾಜಿನ ಹಲಗೆಗಳು, ಕೀಟನಾಶಕಗಳು ಹಾಗೂ ಇತರೆ ಸಾಮಾಗ್ರಿ, ಸಾಧನ–ಸಲಕರಣೆಗಳ ಸರಿಯಾದ ದಾಸ್ತಾನು ಮತ್ತು ಸರಬರಾಜಿನ ಸಂಪೂರ್ಣ ಜವಾಬ್ದಾರಿ ಇವರದ್ದಾಗಿರುತ್ತದೆ. ತಮ್ಮ ಅಧೀನ ಅಂಗ ಸಂಸ್ಥೆಗಳಲ್ಲಿ ಲಭ್ಯವಿರುವ ದಾಸ್ತಾನಿನ ವಿವರಗಳನ್ನು ಕಾಲಕಾಲಕ್ಕೆ ಪರಿಶೀಲಿಸಿ, ವ್ಯತ್ಯಾಸವೇನಾದರೂ ಕಂಡು ಬಂದಲ್ಲಿ ಸೂಕ್ತ ಕ್ರಮಕ್ಕಾಗಿ ಮೇಲಾಧಿಕಾರಿಗಳಿಗೆ ವರದಿ ಮಾಡುವುದು ಹಾಗೂ ದಾಸ್ತಾನಿನ ವರದಿಯನ್ನು ಪ್ರತಿ ತಿಂಗಳು ಸಲ್ಲಿಸುವುದು.
9. ತಮ್ಮ ಕ್ಷೇತ್ರ ಪ್ರವಾಸದ ಸಂದರ್ಭಧಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರಗಳ ಪ್ರಯೋಗಾಲಯಕ್ಕೆ ಭೇಟಿ ನೀಡಿ ಅಲ್ಲಿನ ಚಟುವಟಿಕೆಗಳು, ವರದಿಗಳು, ದಾಖಲೆ ಪುಸ್ತಕಗಳು, ಚಾರ್ಟುಗಳು ಇತ್ಯಾದಿಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಲೋಪದೋಷಗಳು, ಕೊರತೆಗಳೇನಾದರೂ ಇದ್ದಲ್ಲಿ ಸರಿಪಡಿಸಲು ಕೂಡಲೇ ಕ್ರಮ ತೆಗೆದುಕೊಳ್ಳುವುದು.
10. ಇವರುಗಳು ತಮ್ಮ ಕಛೇರಿಯಲ್ಲಿ ಕಾರ್ಯನಿರ್ವಹಿಸುವ ಅಧೀನ ಸಿಬ್ಬಂದಿಗಳ ವೇತನಾಧಿಕಾರಿಯಾಗಿದ್ದು, ಅದಕ್ಕೆ ಸಂಬಂಧಪಟ್ಟ ಲೆಕ್ಕ ಪತ್ರಗಳು, ಬಿಲ್ಲುಗಳು, ನೋಂದಣಿ ಪುಸ್ತಕಗಳು ಇತ್ಯಾದಿಗಳ ಸೂಕ್ತ ನಿರ್ವಹಣೆ ಮಾಡುವುದು.
11. ತಮ್ಮ ಜಿಲ್ಲೆಯಲ್ಲಿ ನಡೆಸಬೇಕಾದ ಸಿಂಪಡಣಾ ಚಟುವಟಿಕೆಯ "ಮುಂಗಡ ಸಿಂಪಡಣಾ ಕಾರ್ಯಕ್ರಮ'ದ ಪಟ್ಟಿಯನ್ನು ತಯಾರಿಸಿ, ಸಂಬಂಧಿಸಿದ ಪ್ರದೇಶಗಳಿಗೆ ಮುಂಚಿತವಾಗಿ ಕೀಟನಾಶಕ ಮತ್ತು ಸಿಂಪಡಣಾ ಪಂಪುಗಳು ಸರಬರಾಜಾಗುವಂತೆ ನೋಡಿಕೊಳ್ಳುವುದು ಇವರ ಸಂಪೂರ್ಣ ಜವಾಬ್ದಾರಿಯಾಗಿರುತ್ತದೆ. ಅಲ್ಲದೆ ಸಿಂಪಡಣಾ ಕಾರ್ಯಕ್ಕೆ ಮುಂಚಿತವಾಗಿ ಅದಕ್ಕೆ ಬೇಕಾಗುವ ಸಾಧನ ಸಲಕರಣೆಗಳು, ವಾಹನ ಇತ್ಯಾದಿಗಳ ಗುಣಮಟ್ಟವನ್ನು ಪರೀಕ್ಷಿಸುವುದೂ ಸಹ ಇವರುಗಳ ಆದ್ಯ ಕರ್ತವ್ಯವಾಗಿರುತ್ತದೆ.
12. ಕೀಟನಾಶಕ ಸಿಂಪಡಣಾ ಕಾರ್ಯವು ನಡೆಯುತ್ತಿರುವ ಪ್ರದೇಶಗಳಿಗೆ ಖುದ್ದು ಭೇಟಿ ನೀಡಿ ಸಿಂಪಡಣಾ ಗುಣಮಟ್ಟವನ್ನು ಪರಿಶೀಲಿಸುವುದು ಹಾಗೂ ಸಿಂಪಡಣಾ ಕಾರ್ಯಕ್ಕೆ ಅಡಚಣೆಗಳೇನಾದರೂ ಬಂದಲ್ಲಿ ನಿವಾರಿಸಲು ಸೂಕ್ತ ಕ್ರಮ ಕೈಗೊಳ್ಳುವುದು.
13. ಮಲೇರಿಯಾ ಬಾಧಿತ ಪ್ರದೇಶಗಳಿಗೆ ಕಾಲಕಾಲಕ್ಕೆ ಭೇಟಿ ನೀಡಿ ನಿಯಂತ್ರಣಕ್ಕೆ ಸೂಕ್ತ ಕ್ರಮ ಕೈಗೊಳ್ಳುವುದರ ಜೊತೆಗೆ ಸ್ಥಳೀಯ ಸಂಘ ಸಂಸ್ಥೆಗಳು, ಸ್ವಯಂ ಸೇವಾ ಸಂಘಗಳ ಮುಖಂಡರುಗಳನ್ನು ಭೇಟಿ ಮಾಡಿ ಚರ್ಚಿಸಿ ಅಗತ್ಯ ಸಹಕಾರ ಪಡೆಯುವುದು.
14. ತಮ್ಮ ಕಛೇರಿಯಲ್ಲಿ ಹಾಗೂ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ರೋಗವಾಹಕ ರೋಗಗಳಿಗೆ ಸಂಬಂಧಿಸಿದ ಸಮಗ್ರ ಅಂಕಿ–ಅಂಶಗಳು, ದಾಖಲೆ ಪತ್ರಗಳು, ಸೂಚ್ಯಾಂಕ, ಭೂಪಟ, ಚಾರ್ಟು ಇತ್ಯಾದಿಗಳು ಲಭ್ಯವಿರುವಂತೆ ನೋಡಿಕೊಳ್ಳುವುದು.
15. ಈ ಕಾರ್ಯಕ್ರಮದ ಚಟುವಟಿಕೆಗಳು ನಿಗದಿತ ವೇಳಾಪಟ್ಟಿಯನ್ನು (Time bound) ಹೊಂದಿರುವುದರಿಂದ ಅವುಗಳನ್ನು ಸೂಕ್ತ ಕಾಲದಲ್ಲಿ ಜಾರಿಗೊಳಿಸಲು ಕಾರ್ಯಪ್ರವೃತ್ತರಾಗುವುದು, ತಮ್ಮ ಜಿಲ್ಲೆಯ Epidemiology ಮತ್ತು ಕೀಟಾಧ್ಯಯನದ ತಪಾಸಣೆಯ ಸಂಪೂರ್ಣ ಜವಾಬ್ದಾರಿ ಇವರದಾಗಿದ್ದು, ಕೀಟ ಶಾಸ್ತ್ರಜ್ಞರೊಂದಿಗೆ ಕೂಡಿ ಸಮಸ್ಯಾತ್ಮಕ ಪ್ರದೇಶಗಳಲ್ಲಿ ರೋಗಗಳ ನಿಯಂತ್ರಣಕ್ಕಾಗಿ ಅಗತ್ಯ ಕ್ರಮಗಳನ್ನು ಕೈಗೊಳ್ಳಲು ಇವರು ಸಂಪೂರ್ಣ ಜವಾಬ್ದಾರರಾಗಿರುತ್ತಾರೆ.
16. ಎನ್ಆರ್ಹೆಚ್ಎಂ–ಎನ್ವಿಬಿಡಿಸಿಪಿ ಅಡಿಯಲ್ಲಿ ನಡೆಯುವ ಕಾರ್ಯಕ್ರಮದ ವಿವಿಧ ಚಟುವಟಿಕೆಗಳ ಕ್ರಿಯಾಯೋಜನೆಯನ್ನು ರಾಜ್ಯ ಮಟ್ಟದಿಂದ ಕಳುಹಿಸಿದ ಮಾರ್ಗದರ್ಶಿಗೆ ಅನುಗುಣವಾಗಿ ಪ್ರತಿ ವರ್ಷವೂ ಮುಂಚಿತವಾಗಿ ಅಂದರೆ ಜಾರಿಗೊಳಿಸಬೇಕಾದ ವರ್ಷದ ಮೊದಲೇ ತಯಾರಿಸಿ ಸಲ್ಲಿಸುವುದು ಮತ್ತು ಅನುಮೋದನೆಗೊಂಡ ಕ್ರಿಯಾ ಯೋಜನೆಯನ್ನು ಅನುಷ್ಠಾನಗೊಳಿಸುವುದು.

17. ಎನ್‌ಆರ್‌ಹೆಚ್‌ಎಂ–ಎನ್‌ವಿಬಿಡಿಸಿಪಿ ಅಡಿಯಲ್ಲಿ ಒದಗಿಸುವ ಅನುದಾನದ ಸಮರ್ಪಕ ಬಳಕೆ, ಖರ್ಚು ವೆಚ್ಚಗಳ ಖುದ್ದು ಪರಿಶೀಲನೆ, ಖರ್ಚಾದ ಹಣಕ್ಕೆ ಸೂಕ್ತ ದಾಖಲೆ, ಖರ್ಚು ವೆಚ್ಚಗಳ ತಖ್ತೆ ಹಾಗೂ ಬಳಕಾ ಪ್ರಮಾಣ ಪತ್ರಗಳ ತಯಾರಿ ಮತ್ತು ಅವುಗಳನ್ನು ಕಾಲಕಾಲಕ್ಕೆ ಮೇಲಾಧಿಕಾರಿಗಳಿಗೆ ಸಲ್ಲಿಸುವುದು.
18. ಕಾರ್ಯಕ್ರಮಕ್ಕೆ ಸಂಬಂಧಿಸಿದಂತೆ ತಮ್ಮ ಮೇಲಾಧಿಕಾರಿಗಳು ಕಾಲಕಾಲಕ್ಕೆ ವಹಿಸುವ ಕೆಲಸ ಕಾರ್ಯಗಳನ್ನು ಸೂಕ್ತವಾಗಿ ನೆರವೇರಿಸುವುದು.
19. ಒಟ್ಟಾರೆ, ಜಿಲ್ಲಾ ರೋಗವಾಹಕ ಆಶ್ರಿತ ರೋಗಗಳ ನಿಯಂತ್ರಣಾಧಿಕಾರಿಗಳು ಈ ರೋಗಗಳು ಹರಡದಂತೆ ಸೂಕ್ತ ಮುಂಜಾಗ್ರತಾ ಮತ್ತು ನಿಯಂತ್ರಣ ಕ್ರಮಗಳನ್ನು ಸಕಾಲದಲ್ಲಿ ಕೈಗೊಂಡು ಅವುಗಳ ನಿರ್ವಹಣೆ ಮತ್ತು ಮೇಲ್ವಿಚಾರಣೆ ನಡೆಸಕ್ಕದ್ದು ಹಾಗೂ ಈ ರೋಗಗಳಿಂದ ತಮ್ಮ ವ್ಯಾಪ್ತಿಯ ಪ್ರದೇಶಗಳಲ್ಲಿ ಯಾವುದೇ ಸಾವು ನೋವು ಸಂಭವಿಸದಂತೆ ಜಾಗೃತೆ ವಹಿಸುವುದು.

ಪಿ.ಆರ್. 1230

**ಐ. ಹೇಮನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಕರ್ನಾಟಕ ಭೂ ಸುಧಾರಣೆ ಕಾಯ್ದೆಯನ್ವಯ ಸರ್ಕಾರಕ್ಕೆ ನಿಹಿತಗೊಳಿಸಲಾದ ಜಮೀನಿಗೆ ಸಂಬಂಧಿಸಿದಂತೆ ಮಾಜಿ ಭೂ ಮಾಲೀಕರಿಗೆ ಪರಿಹಾರ ನೀಡಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ: 1.** ಬಿಜಾಪುರ ಜಿಲ್ಲಾಧಿಕಾರಿಯವರ ಪತ್ರ ಸಂ: ಕಂವಿಭೂಸಿಆರ್–42/2010–11, ದಿನಾಂಕ 18/20–1–2011.

**2.** ಕರ್ನಾಟಕ ಉಚ್ಚ ನ್ಯಾಯಾಲಯದ ತೀರ್ಪು ದಿನಾಂಕ 14–8–2006, ರಿಟ್ ಪಿಟಿಷನ್ ನಂ. 27411/2005.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿ ಜಿಲ್ಲಾಧಿಕಾರಿಯವರ ಪ್ರಸ್ತಾವನೆಯಲ್ಲಿ ಶ್ರೀ ಜೆ.ಎಸ್. ದೇಶಮುಖ್, ಇವರಿಗೆ ಸಿಂಧಗಿ ತಾಲ್ಲೂಕಿನ ಜಮೀನುಗಳು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 72(4)ರ ಪ್ರಕಾರ ಜಮೀನಿನಲ್ಲಿನ (Structure) ಒಡ್ಡುಗಳ ಪರಿಹಾರ ಧನ ಸಂದಾಯ ಮಾಡುವ ಬಗ್ಗೆ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಪಿಟೀಷನ್ ನಂ. 27411/2005 (ಎಲ್‌ಆರ್) ರಡಿಯಲ್ಲಿ ಪ್ರಕರಣ ದಾಖಲಿಸಿದ್ದು ಸದರಿ ಪ್ರಕರಣದಲ್ಲಿ ಜಿಲ್ಲಾಧಿಕಾರಿಗಳು ಹಾಗೂ ತಹಶೀಲ್ದಾರ್, ಸಿಂಧಗಿ, ಇವರಿಗೆ ಪರಿಶೀಲಿಸಿ ನಿಯಮಾನುಸಾರ ಕ್ರಮ ಜರುಗಿಸಲು ಮಾನ್ಯ ಉಚ್ಚ ನ್ಯಾಯಾಲಯದಿಂದ ದಿನಾಂಕ 14–8–2006ರಂದು ಆದೇಶವಾಗಿರುತ್ತದೆ.

ಸದರಿ ಆದೇಶದನ್ವಯ ಅರ್ಜಿದಾರರ ಜಮೀನುಗಳಲ್ಲಿರುವ ಒಡ್ಡುಗಳ ಪರಿಹಾರ ಧನ ನೀಡುವ ಬಗ್ಗೆ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ವಿಜಾಪೂರ, ಇವರಿಂದ ವರದಿಯನ್ನು ತಹಸೀಲ್ದಾರ್, ಸಿಂಧಗಿ, ಇವರು ಪಡೆದುಕೊಂಡು ಸಲ್ಲಿಸಿರುತ್ತಾರೆ. ಸದರಿ ಜಮೀನುಗಳಲ್ಲಿರುವ ಒಡ್ಡುಗಳ ಪರಿಹಾರ ಧನ ರೂ. 59,85,691/– (ಐವತ್ತೊಂಬತ್ತು ಲಕ್ಷ ಎಂಭತ್ತೈದು ಸಾವಿರ ಆರುನೂರ ತೊಂಭತ್ತೊಂದು ರೂಪಾಯಿಗಳು) ಮಾತ್ರ ನಿಗದಿಪಡಿಸಿ ವರದಿಯನ್ನು ಜಲಾನಯನ ಹಾಗೂ ಕೃಷಿ ಅಧಿಕಾರಿಗಳು ಸಲ್ಲಿಸಿರುತ್ತಾರೆ ಎಂದು ಸದರಿ ಹಣವನ್ನು ಭೂ ಮಾಲೀಕರಿಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 72(4)ರನ್ವಯ ನೀಡಬೇಕಾಗಿದ್ದು, ಸದರಿ ಹಣ ತಮ್ಮಲ್ಲಿ ಇಲ್ಲದೇ ಇರುವುದರಿಂದ ಸರ್ಕಾರದಿಂದ ಹಣ ಬಿಡುಗಡೆಯಾದಲ್ಲಿ ಅರ್ಜಿದಾರರಿಗೆ ಪರಿಹಾರ ಧನ ನೀಡಲಾಗುವುದೆಂದು ತಹಶೀಲ್ದಾರ್, ಸಿಂಧಗಿ, ಇವರು ವರದಿ ಸಲ್ಲಿಸಿರುತ್ತಾರೆ. ಅರ್ಜಿದಾರರಿಗೆ (Structure) ಒಡ್ಡುಗಳ ಪರಿಹಾರ ಧನ ರೂ. 59,85,691/– (ಐವತ್ತೊಂಬತ್ತು ಲಕ್ಷ ಎಂಭತ್ತೈದು ಸಾವಿರ ಆರುನೂರ ತೊಂಭತ್ತೊಂದು ರೂಪಾಯಿಗಳು) ಮಾತ್ರ ಪಾವತಿಸುವ ಬಗ್ಗೆ ಸರ್ಕಾರದಿಂದ ಅನುದಾನ ಬಿಡುಗಡೆ ಮಾಡಲು ಕೋರಿರುತ್ತಾರೆ.

ಆರ್ಥಿಕ ಇಲಾಖೆಯ ಅಭಿಪ್ರಾಯ ದಿನಾಂಕ 23–4–2011ರಲ್ಲಿ ಈ ಸಂಬಂಧ ಕರ್ನಾಟಕ ಉಚ್ಚ ನ್ಯಾಯಾಲಯದ ತೀರ್ಪಿನನ್ವಯ ಸೂಕ್ತ ಕ್ರಮ ವಹಿಸುವಂತೆ ಆಡಳಿತ ಇಲಾಖೆಯು ಸೂಚಿಸಲಾಗಿದೆ. ಜಿಲ್ಲಾಧಿಕಾರಿಯವರ ಬೇಡಿಕೆಯನ್ನು ಸರ್ಕಾರವು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಲು ತೀರ್ಮಾನಿಸಿದೆ ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ: ಕಂಇ 303 ಎಲ್‌ಆರ್‌ಎ 2010, ಬೆಂಗಳೂರು, ದಿನಾಂಕ 3–5–2011.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳಂತೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರಡಿಯಲ್ಲಿ ಭೂಮಿ ಕಳೆದುಕೊಂಡ ಮಾಜಿ ಭೂ ಮಾಲೀಕರಾದ ಅರ್ಜಿದಾರರಿಗೆ ಭೂ ಪರಿಹಾರವನ್ನು ಪಾವತಿಸಲು ಲೆಕ್ಕ ಶೀರ್ಷಿಕೆ "4515–00–103–1–01–100" (ಯೋಜನೇತರ) ಅಡಿಯಲ್ಲಿ ಒಟ್ಟು ರೂ. 59,85,691/–ಗಳನ್ನು (ಐವತ್ತೊಂಬತ್ತು ಲಕ್ಷ ಎಂಭತ್ತೈದು ಸಾವಿರ ಆರುನೂರ ತೊಂಭತ್ತೊಂದು ರೂಪಾಯಿಗಳು) ಮಾತ್ರ 2011–12ನೇ ಸಾಲಿನ ಆಯವ್ಯಯದಲ್ಲಿ ಮಂಜೂರು ಮಾಡಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2003, ದಿನಾಂಕ 12–6–2003ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಈ ಆದೇಶವನ್ನು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1231

**ಟಿ.ಎನ್. ನಾರಾಯಣಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಸುಧಾರಣೆ).

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಮಾಳಿಗೆ ಶಂಕರ್, ತಹಶೀಲ್ದಾರ್, ತಾಲ್ಲೂಕು ದಂಡನಾಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆ ಕುರಿತು– ಆದೇಶ ಹೊರಡಿಸುವ ಬಗ್ಗೆ

**ಓದಲಾಗಿದೆ:** 1. ಪೊಲೀಸ್ ಮಹಾ ನಿರ್ದೇಶಕರು, ಸಿಐಡಿ ತರಬೇತಿ, ವಿಶೇಷ ಘಟಕಗಳು ಮತ್ತು ಆರ್ಥಿಕ ಅಪರಾಧಗಳು, ಕಾರ್ಲ್‌ಟನ್ ಭವನ, ಅರಮನೆ ರಸ್ತೆ, ಬೆಂಗಳೂರು ಇವರ ಪತ್ರ ಸಂಖ್ಯೆ: 155/ಅಪರಾಧ/ಎಡಿಸಿ/ಸಿಐಡಿ/2009, ದಿನಾಂಕ 16–2–2010.

2. ಸರ್ಕಾರದ ಉಪ ಕಾರ್ಯದರ್ಶಿಗಳು, ಕಂದಾಯ ಇಲಾಖೆ ಇವರ ಅ.ಸ.ಪತ್ರ ಸಂಖ್ಯೆ: ಕಂಇ/35/ಎಡಿಇ/2010, ದಿನಾಂಕ 27–10–2010

3. ಮೈಸೂರು ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ: ಇಎಸ್‌ಟಿ (2) ಸಿಆರ್/107/2010–11, ದಿನಾಂಕ 18–12–2010.

**ಪ್ರಸ್ತಾವನೆ:**

ಶ್ರೀ ಮಾಳಿಗೆ ಶಂಕರ್, ತಹಶೀಲ್ದಾರ್, ತಾಲ್ಲೂಕು ದಂಡನಾಧಿಕಾರಿ ಇವರು ಮೃತಪಟ್ಟ ಸುಂದರಮ್ಮ ಇವರ ಮರಣ ಪೂರ್ವ ಹೇಳಿಕೆಯನ್ನು ಮಾಡಿಕೊಂಡಿದ್ದು, ಹೇಳಿಕೆ ಮಾಡಿಕೊಳ್ಳುವಾಗ ಗಾಯಾಳುವಿಗೆ ಚಿಕಿತ್ಸೆ ನೀಡುತ್ತಿರುವ ವೈದ್ಯಾಧಿಕಾರಿಗಳಿಂದ ಗಾಯಾಳುವಿನ ಹೇಳಿಕೆ ನೀಡುವ ಸ್ಥಿತಿಗತಿಯ ಬಗ್ಗೆ ವೈದ್ಯರ ಪ್ರಮಾಣಿಕತೆಯನ್ನು ಪಡೆಯಬೇಕಾಗಿತ್ತು. ಆದರೆ ಆ ರೀತಿ ಷರಾ ಬರೆಸಿಕೊಳ್ಳದೇ ಕೇವಲ ವೈದ್ಯಾಧಿಕಾರಿಯವರ ಷರಾವನ್ನು ಮುದ್ರಿತ ನಮೂನೆಯಲ್ಲಿ ಪಡೆದುಕೊಂಡಿರುವುದು ಕಂಡು ಬಂದಿದ್ದು, ಮರಣ ಪೂರ್ವ ಹೇಳಿಕೆಯ ಒಂದು ಅತೀ ಮುಖ್ಯ ಸಾಕ್ಷ್ಯಾಧಾರವೆಂದು ತಿಳಿದಿದ್ದರೂ ಸಹ ತಾಲ್ಲೂಕು ದಂಡನಾಧಿಕಾರಿಯವರು ಸಮರ್ಪಕ ಹೇಳಿಕೆ ಮಾಡಿಕೊಳ್ಳದೇ ಕರ್ತವ್ಯ ನಿರ್ಲಕ್ಷತೆಯನ್ನು ಮಾಡಿರುವುದು ಕಂಡು ಬಂದಿರುವುದರಿಂದ, ಸದರಿಯವರ ವಿರುದ್ಧ ಸೂಕ್ತ ಇಲಾಖಾ ಕ್ರಮ ತೆಗೆದುಕೊಳ್ಳುವಂತೆ ಕೋರಿ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ದಿನಾಂಕ 16–2–2010ರ ಪ್ರಸ್ತಾವನೆಯನ್ನು ಪೊಲೀಸ್ ಮಹಾ ನಿರ್ದೇಶಕರು, ಸಿಐಡಿ ತರಬೇತಿ, ವಿಶೇಷ ಘಟಕಗಳು ಮತ್ತು ಆರ್ಥಿಕ ಅಪರಾಧಗಳು, ಕಾರ್ಲ್‌ಟನ್ ಭವನ, ಅರಮನೆ ರಸ್ತೆ, ಬೆಂಗಳೂರು ರವರು ಸರ್ಕಾರಕ್ಕೆ ಕಳುಹಿಸಿರುತ್ತಾರೆ.

ಪೊಲೀಸ್ ಮಹಾ ನಿರ್ದೇಶಕರು, ಸಿಐಡಿ ತರಬೇತಿ, ವಿಶೇಷ ಘಟಕಗಳು ಮತ್ತು ಆರ್ಥಿಕ ಅಪರಾಧಗಳು, ಕಾರ್ಲ್‌ಟನ್ ಭವನ, ಅರಮನೆ ರಸ್ತೆ, ಬೆಂಗಳೂರು ರವರ ಪ್ರಸ್ತಾವನೆಯನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಸೇವೆಗಳು) ಶಾಖೆಗೆ ಮುಂದಿನ ಕ್ರಮ ಜರುಗಿಸಲು ಕೋರಲಾಗಿತ್ತು. ಸದರಿ ಪ್ರಸ್ತಾವನೆಯನ್ನು ಸಿಆಸು ಇಲಾಖೆಯು ಕಂದಾಯ ಇಲಾಖೆ ಹಿಂದಿರುಗಿಸಿ, ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 1 ಸೇಇವಿ 2005, ದಿನಾಂಕ 9–2–2005ರಲ್ಲಿನ ಮಾರ್ಗಸೂಚಿಯನ್ವಯ ಪ್ರಸ್ತಾವನೆಯನ್ನು ಕಳುಹಿಸುವಂತೆ ತಿಳಿಸಿರುತ್ತಾರೆ. ಹಾಗೂ ಅಧಿಕಾರಿಯು ತಹಶೀಲ್ದಾರ್ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ನಡೆದ ಘಟನೆಯಾಗಿದ್ದು, ನಿರ್ದಿಷ್ಟ ಕರ್ತವ್ಯ ಲೋಪದ ಮಾಹಿತಿ, ಯಾವ ಕಾಯ್ದೆ, ನಿಯಮ ಇತ್ಯಾದಿಗಳ ಉಲ್ಲಂಘನೆ ಇವುಗಳನ್ನು ನೀಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ 27–10–2010ರ ಅ.ಸ. ಪತ್ರದಲ್ಲಿ ಶ್ರೀ ಮಾಳಿಗೆ ಶಂಕರ್, ಕೆ.ಎ.ಎಸ್. ಹಿಂದಿನ ತಹಶೀಲ್ದಾರ್, ಚಾಮರಾಜನಗರ ತಾಲ್ಲೂಕು, ಚಾಮರಾಜನಗರ ಪ್ರಸ್ತುತ ವಿಶೇಷ ಭೂ ಸ್ವಾಧೀನಾಧಿಕಾರಿ, ಕೆ.ಐ.ಎ.ಡಿ.ಬಿ. ಮೈಸೂರು ಇವರ ವಿರುದ್ಧ ಪೊಲೀಸ್ ಮಹಾ ನಿರ್ದೇಶಕರು, ಸಿಐಡಿ ತರಬೇತಿ, ವಿಶೇಷ ಘಟಕಗಳು ಮತ್ತು ಆರ್ಥಿಕ ಅಪರಾಧಗಳು, ಕಾರ್ಲ್‌ಟನ್ ಭವನ, ಅರಮನೆ ರಸ್ತೆ, ಬೆಂಗಳೂರು ಇವರ ಪ್ರಸ್ತಾವನೆಯಂತೆ ಶಿಸ್ತು ಕ್ರಮ ತೆಗೆದುಕೊಳ್ಳುವ ಕುರಿತ ಪ್ರಕರಣದ ಬಗ್ಗೆ ಪರಿಶೀಲಿಸಿ, ದೋಷಾರೋಪಣಾ ಪಟ್ಟಿಯನ್ನು (ಅನುಬಂಧ–1 ರಿಂದ 4ರವರೆಗೆ) ತಯಾರಿಸಿ ಜರೂರಾಗಿ ಸರ್ಕಾರಕ್ಕೆ ಕಳುಹಿಸುವಂತೆ ಮೈಸೂರು ಜಿಲ್ಲಾಧಿಕಾರಿಗಳನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ 18–12–2010ರ ಪತ್ರದಲ್ಲಿ, ಶ್ರೀ ಮಾಳಿಗೆ ಶಂಕರ್, ಕೆ.ಎ.ಎಸ್. ಹಿಂದಿನ ತಹಶೀಲ್ದಾರ್, ಚಾಮರಾಜನಗರ ತಾಲ್ಲೂಕು, ಚಾಮರಾಜನಗರ ಪ್ರಸ್ತುತ ವಿಶೇಷ ಭೂ ಸ್ವಾಧೀನಾಧಿಕಾರಿ, ಕೆ.ಐ.ಎ.ಡಿ.ಬಿ, ಮೈಸೂರು ಇವರು ಈ ಹಿಂದೆ ಮೈಸೂರು ತಾಲ್ಲೂಕು ತಹಶೀಲ್ದಾರರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ (ಚಾಮರಾಜನಗರ ಪೂರ್ವ ಪೊಲೀಸ್ ಠಾಣೆ ಸಂಖ್ಯೆ: 127/2008ಕ್ಕೆ ಸಂಬಂಧಿಸಿದಂತೆ) ಮರಣ ಪೂರ್ವ ಹೇಳಿಕೆ ಮಾಡಿಕೊಳ್ಳುವಾಗ ಸರ್ಕಾರದ ಪತ್ರ ಸಂಖ್ಯೆ: ಹೆಚ್‌ಡಿ 37 ಎಂಎಸ್ 95, ದಿನಾಂಕ 27–12–1996ರನ್ವಯ ಗಾಯಾಳುವಿನ ಸ್ಥಿತಿಗತಿ ಬಗ್ಗೆ ವೈದ್ಯಾಧಿಕಾರಿಗಳಿಂದ ದೃಢೀಕರಣ ಪಡೆದ ನಂತರವೇ ತಾಲ್ಲೂಕು ದಂಡನಾಧಿಕಾರಿಗಳು ಮರಣ ಪೂರ್ವ ಹೇಳಿಕೆ ಮಾಡಬೇಕಾಗಿರುತ್ತದೆ ಎಂದು ತಿಳಿಸಿರುವುದಿಲ್ಲ. ಹಾಗೂ ಈ ಬಗ್ಗೆ ಕ್ರಮ ವಹಿಸುವ ಕುರಿತು ಭಾರತೀಯ ದಂಡ ಸಂಹಿತೆ ಕಲಂ 174 ಹಾಗೂ ಸಾಕ್ಷ್ಯ ಅಧಿನಿಯಮ 32ರ ಅನ್ವಯ ಯಾವುದೇ ಸ್ಪಷ್ಟವಾದ ನಿರ್ದೇಶನ/ನಿಬಂಧನೆ ಕಂಡು ಬರುವುದಿಲ್ಲ. ದೋಷಾರೋಪಣೆ ಮಾಡುವಾಗ ಕಾಯ್ದೆ/ ನಿಯಮ/ಸರ್ಕಾರದ ಸುತ್ತೋಲೆ/ಆದೇಶ ಉಲ್ಲಂಘಿಸಿರುವ ಕುರಿತು ನಿರ್ದಿಷ್ಟವಾಗಿ ಉಲ್ಲೇಖಿಸಬೇಕಾಗಿರುವುದರಿಂದ, ಈ ಕುರಿತು ಪ್ರಕರಣದ ಅಧಿಕಾರಿ ಯಾವ ಕಾಯ್ದೆ / ನಿಯಮ ಉಲ್ಲಂಘಿಸಿರುತ್ತಾರೆ ಎಂಬುದಕ್ಕೆ ಸ್ಪಷ್ಟೀಕರಣ ನೀಡುವಂತೆ ಸರ್ಕಾರವನ್ನು ಜಿಲ್ಲಾಧಿಕಾರಿಗಳು ಕೋರಿರುತ್ತಾರೆ.

ಸದರಿ ಪ್ರಕರಣವನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಲಾಗಿ, ಒಳಾಡಳಿತ ಇಲಾಖೆಯ ದಿನಾಂಕ 27–12–1996ರ ಪತ್ರದಲ್ಲಿ ಮರಣ ಪೂರ್ವ ಹೇಳಿಕೆ ಪಡೆಯುವ ಮುನ್ನ ಗಾಯಾಳುವಿನ ಸ್ಥಿತಿ ಕುರಿತು ವೈದ್ಯಾಧಿಕಾರಿ ದೃಢೀಕರಣ ಪಡೆಯುವ ಅಗತ್ಯತೆ ಕಂಡು ಬರುವುದಿಲ್ಲ ಹಾಗೂ ತಹಶೀಲ್ದಾರರು ಮರಣ ಪೂರ್ವ ಹೇಳಿಕೆ ಪಡೆಯುವಾಗ ಹಾಜರಿದ್ದು, ಹೇಳಿಕೆ ಪಡೆದ ನಂತರ ಹೇಳಿಕೆಯನ್ನು ವಿಶ್ವಾಸ ಪೂರಕವಾಗಿ ದಾಖಲಿಸಲಾಗಿದೆ ಮತ್ತು ಗಾಯಾಳು ಹೇಳಿಕೆ ಕೊಡುವ ಮಾನಸಿಕ ಸ್ಥಿತಿ ಕುರಿತು ದೃಢೀಕರಿಸಬೇಕಾಗಿರುತ್ತದೆ ಎಂದು ತಿಳಿಸಲಾಗಿದೆ. ಮೈಸೂರು ಆಡಳಿತ ತರಬೇತಿ ಸಂಸ್ಥೆಯಿಂದ ಹೊರಡಿಸಲಾದ ಕೈಪಿಡಿ (Hand book for executive magistrate ಪುಟ ಸಂಖ್ಯೆ 401) ಭಾಗ 14 ಪ್ಯಾರ 14.6ರಲ್ಲಿ There is no rule which requires the Medical Officer in whose presence the dying declaration is recorded to certify tha the declarant is in a fit condition to speak. It is the person who records the dying declaration, who puts questions to the declarant to satisfy himself that the declarant is in a fit condition to speak. The business of the Medical Officer is only to certify that the drying declaration was recorded in his presence, in the hospital premises, by the person who recorded it ಎಂದು ಉಲ್ಲೇಖಿಸಲಾಗಿರುತ್ತದೆ. ಆದ್ದರಿಂದ, ಶ್ರೀ ಮಾಳಿಗೆ ಶಂಕರ್, ಕೆ.ಎ.ಎಸ್. ಹಿಂದಿನ ತಹಶೀಲ್ದಾರ್, ಚಾಮರಾಜನಗರ ತಾಲ್ಲೂಕು, ಚಾಮರಾಜನಗರ ಪ್ರಸ್ತುತ ವಿಶೇಷ ಭೂಸ್ವಾಧೀನಾಧಿಕಾರಿ, ಕೆ.ಐ.ಎ.ಡಿ.ಬಿ., ಮೈಸೂರು

ಇವರ ವಿರುದ್ಧ ಹೂಡಲು ಉದ್ದೇಶಿಸಿರುವ ವಿಚಾರಣೆಯನ್ನು ಕೈಬಿಟ್ಟು ಪ್ರಕರಣವನ್ನು ಮುಕ್ತಾಯ ಮಾಡಲು ಹಾಗೂ ಸದರಿಯವರಿಗೆ ಇನ್ನು ಮುಂದೆ ಇಂತಹ ಪ್ರಕರಣ ಮರುಕಳಿಸದಂತೆ ಎಚ್ಚರಿಕೆ ನೀಡಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಕಂಇ 35 ಎಡಿಇ 2010, ಬೆಂಗಳೂರು, ದಿನಾಂಕ 20–4–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ಮಾಳಿಗೆ ಶಂಕರ್, ಕೆ.ಎ.ಎಸ್. ಹಿಂದಿನ ತಹಶೀಲ್ದಾರ್, ಚಾಮರಾಜನಗರ ತಾಲ್ಲೂಕು, ಚಾಮರಾಜನಗರ ಪ್ರಸ್ತುತ ವಿಶೇಷ ಭೂಸ್ವಾಧೀನಾಧಿಕಾರಿ, ಕೆ.ಐ.ಎ.ಡಿ.ಬಿ, ಮೈಸೂರು ಇವರ ವಿರುದ್ಧ ಹೂಡಲು ಉದ್ದೇಶಿಸಿರುವ ವಿಚಾರಣೆಯನ್ನು ಕೈಬಿಟ್ಟು, ಪ್ರಕರಣವನ್ನು ಮುಕ್ತಾಯಗೊಳಿಸಿ ಆದೇಶಿಸಿದೆ ಹಾಗೂ ಸದರಿ ಅಧಿಕಾರಿಯವರಿಗೆ ಇನ್ನು ಮುಂದೆ ಇಂತಹ ಪ್ರಕರಣ ಮರುಕಳಿಸದಂತೆ ನೋಡಿಕೊಳ್ಳಲು ಎಚ್ಚರಿಕೆ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಗೀತಾ ರಮೇಶ್**
ಸರ್ಕಾರದ ಜಂಟಿ ಕಾರ್ಯದರ್ಶಿ,
ಕಂದಾಯ ಇಲಾಖೆ
(ಭೂಮಂಜೂರಾತಿ, ಭೂಕಂದಾಯ ಮತ್ತು ಸೇವೆಗಳು).

**ಪಿ.ಆರ್. 1232**

## ಕಂದಾಯ ಸಚಿವಾಲಯ

**ವಿಷಯ:** ಆಸರೆ ಯೋಜನೆಯಡಿಯಲ್ಲಿ ಮನೆಗಳ ನಿರ್ಮಾಣಕ್ಕಾಗಿ ಜಿಲ್ಲಾಧಿಕಾರಿ, ಬಾಗಲಕೋಟೆ ಜಿಲ್ಲೆರವರಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ:** ಮಾನ್ಯ ಮುಖ್ಯಮಂತ್ರಿಗಳ ಕಛೇರಿಯ ಕಡತ ಸಂ. ಮುಮಕಾ/303/ಆಸರೆ/2011.

**ಪ್ರಸ್ತಾವನೆ:**

ಮೇಲೆ ಓದಲಾದ ಮಾನ್ಯ ಮುಖ್ಯಮಂತ್ರಿಗಳ ಕಛೇರಿಯ ಕಡತದಲ್ಲಿ ಸೇವಾ ಭಾರತಿ, ಕರ್ನಾಟಕ ಇವರು ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ ತಾಲ್ಲೂಕು, ಇನಾಂಬೂದಿಹಾಳ್ ಗ್ರಾಮದಲ್ಲಿ 92 ಮನೆಗಳನ್ನು ನಿರ್ಮಿಸುತ್ತಿದ್ದು, ಈ ಮನೆಗಳ ನಿರ್ಮಾಣವನ್ನು ಪೂರ್ಣಗೊಳಿಸಲು ರೂ.18,58,103/–ಗಳನ್ನು ಬಿಡುಗಡೆ ಮಾಡಲು ಮಾನ್ಯ ಮುಖ್ಯಮಂತ್ರಿಗಳು ಆದೇಶಿಸಿರುತ್ತಾರೆ.

ಮೇಲ್ಕಂಡ ಹಿನ್ನಲೆಯಲ್ಲಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ: ಕಂಇ 139 ಟಿಎನ್‌ಆರ್ 2011, ಬೆಂಗಳೂರು, ದಿನಾಂಕ 29–4–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆಸರೆ ಯೋಜನೆ ಅಡಿಯಲ್ಲಿ ಬಾಗಲಕೋಟೆ ಜಿಲ್ಲೆಯಲ್ಲಿ ಸೇವಾ ಭಾರತಿ ಕರ್ನಾಟಕ, ಸಂಸ್ಥೆಯವರು ನಿರ್ಮಾಣ ಮಾಡುತ್ತಿರುವ ಮನೆಗಳನ್ನು ಪೂರ್ಣಗೊಳಿಸಲು ಅನುವಾಗುವಂತೆ ಹಾಗೂ ಸೇವಾ ಭಾರತಿ ಸಂಸ್ಥೆಯವರು ಶಿಫಾರಸ್ಸು ಮಾಡುವ ಕಾಮಗಾರಿ ಬಿಲ್ಲುಗಳನ್ನು ರೂ. 18,58,103/–ಕ್ಕೆ ಸೀಮಿತಗೊಳಿಸಿ ಪಾವತಿಸಲು ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ ಇವರಿಗೆ ರೂ.18,58,103/– (ರೂಪಾಯಿ ಹದಿನೆಂಟು ಲಕ್ಷದ ಐವತ್ತೆಂಟು ಸಾವಿರದ ನೂರ ಮೂರು ಮಾತ್ರ)ಗಳ ಅನುದಾನವನ್ನು ಲೆಕ್ಕ ಶೀರ್ಷಿಕೆ 8235–00–111–0–02 'Public Contributions to the Calamity Relief' ಅಡಿಯಲ್ಲಿ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ ಇವರು ಮೇಲೆ ತಿಳಿಸಿರುವ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಪೇಯಿಸ್ ರಸೀದಿ (ಸಿಟಿಎಸ್–8) ಬಿಲ್ಲು ತಯಾರಿಸಿ, ಮೇಲು ಸಹಿ ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಲು ಸೂಚಿಸಿದೆ.

ಈ ಹಿಂದೆ ಬಿಡುಗಡೆ ಮಾಡಿದ್ದ ಅನುದಾನಕ್ಕೆ ಹಾಗೂ ಈಗ ಬಿಡುಗಡೆ ಮಾಡುತ್ತಿರುವ ಅನುದಾನಕ್ಕೆ ಹಣ ಬಳಕೆ ಪತ್ರವನ್ನು ವೆಚ್ಚದ ವಿವರಗಳೊಂದಿಗೆ ಸಲ್ಲಿಸುವುದು. ಹಾಗೂ ಭೌತಿಕ ಹಾಗೂ ಆರ್ಥಿಕ ಪ್ರಗತಿಯ ವಿವರಗಳನ್ನು ಸಹ ಸಲ್ಲಿಸುವುದು.

ಈ ಮೊತ್ತವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಉಪಯೋಗಿಸತಕ್ಕದ್ದು.

ಈ ಆದೇಶವನ್ನು ಕಡತ ಸಂಖ್ಯೆ: ಮುಮಕಾ/303/ಆಸರೆ/2011, (ಕಂಇ 139 ಟಿಎನ್‌ಆರ್ 2011)ರಲ್ಲಿ ಮಾನ್ಯ ಮುಖ್ಯ ಮಂತ್ರಿಯವರು ನೀಡಿರುವ ಅನುಮೋದನೆ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಬಾಲಕೃಷ್ಣಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ವಿ.ನಿ. ಮತ್ತು ಸೇವೆ–2).

ಪಿ.ಆರ್. 1233

## ಕಂದಾಯ ಸಚಿವಾಲಯ

**ವಿಷಯ:** ಗದಗ್ ಜಿಲ್ಲೆಯಲ್ಲಿ ಆಸರೆ ಯೋಜನೆಯಡಿಯಲ್ಲಿ ಮನೆಗಳನ್ನು ಹಸ್ತಾಂತರಿಸುವ ಸಂಬಂಧ–ಇಂಗ್ಲೀಷ್‌ನಲ್ಲಿ ಕಿರು ಹೊತ್ತಿಗೆ ಮುದ್ರಿಸಿದ ವೆಚ್ಚ ಭರಿಸುವ ಬಗ್ಗೆ

**ಓದಲಾಗಿದೆ:** ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಗಳ ಟಿಪ್ಪಣಿ ಸಂ: ಮುಮಕಾ/1420/2011, ದಿನಾಂಕ 18–3–2011

**ಪ್ರಸ್ತಾವನೆ:**

ಗದಗ ಜಿಲ್ಲೆಯ ರೋಣ ತಾಲ್ಲೂಕಿನ ಹೊಳೆ ಆಲೂರಿನಲ್ಲಿ ಸೇವಾ ಭಾರತಿ ಸಂಸ್ಥೆಯ ವತಿಯಿಂದ ಆಸರೆ ಯೋಜನೆಯಡಿಯಲ್ಲಿ ಮನೆಗಳನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವ ಸಂಬಂಧ ಇಂಗ್ಲೀಷ್‌ನಲ್ಲಿ ಕಿರುಹೊತ್ತಿಗೆ ಮುದ್ರಿಸಿದ ವೆಚ್ಚ ರೂ. 94,000/–ಗಳನ್ನು ಮೆ: ಯಕ್ಷಿ ಕಮ್ಯುನಿಕೇಷನ್, ಬೆಂಗಳೂರು ಇವರಿಗೆ ಬಿಡುಗಡೆ ಮಾಡುವಂತೆ, ಮೇಲೆ ಓದಲಾದ ಟಿಪ್ಪಣಿಯಲ್ಲಿ ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಗಳು ಕೋರಿರುತ್ತಾರೆ.

ಈ ಹಿನ್ನಲೆಯಲ್ಲಿ, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 125 ಟಿಎನ್‌ಆರ್ 2011, ಬೆಂಗಳೂರು, ದಿನಾಂಕ 28–4–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಗದಗ ಜಿಲ್ಲೆಯ ರೋಣ ತಾಲ್ಲೂಕಿನ ಹೊಳೆ ಆಲೂರಿನಲ್ಲಿ ಆಸರೆ ಯೋಜನೆಯಡಿಯಲ್ಲಿ ಮನೆಗಳನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವ ಸಂಬಂಧ ಇಂಗ್ಲೀಷ್‌ನಲ್ಲಿ ಕಿರು ಹೊತ್ತಿಗೆ ಮುದ್ರಿಸಿದ ವೆಚ್ಚ ರೂ. 94,000/– (ರೂಪಾಯಿ ತೊಂಬತ್ತುನಾಲ್ಕು ಸಾವಿರ ಮಾತ್ರ)ಗಳನ್ನು ಮೆ ಯಕ್ಷಿ ಕಮ್ಯೂನಿಕೇಷನ್, ಬೆಂಗಳೂರು ಇವರಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 8235–00–111–0–02 'Public Contributions to the Calamity Relief' ಅಡಿಯಲ್ಲಿ ಭರಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು ಕಾರ್ಯದರ್ಶಿಗಳು, ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ) ಸದರಿ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಡ್ರಾ ಮಾಡಲು ಪೇಯೀಸ್ ರಸೀದಿ (ಸಿಟಿಎಸ್–8) ಬಿಲ್ಲು ತಯಾರಿಸಿ, ಮೇಲು ಸಹಿ ಮಾಡಿ ಖಜಾನೆಗೆ ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ಮಾನ್ಯ ಮುಖ್ಯಮಂತ್ರಿಗಳ ಕಾರ್ಯದರ್ಶಿಗಳ ಟಿಪ್ಪಣಿ ಸಂಖ್ಯೆ: ಮುಮಕಾ/1420/2011, ದಿನಾಂಕ 18–3–2011ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಬಾಲಕೃಷ್ಣಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ವಿ.ನಿ. & ಸೇವೆಗಳು–2).

ಪಿ.ಆರ್. 1234

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಸಿ. ನಾಗಯ್ಯ ಕೆ.ಎ.ಎಸ್. (ಹಿ.ಶ್ರೇ) ಅಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆ–ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ನೋಟೀಸ್ ಸಂ. ಸಿಆಸುಇ 236 ಕೆಇವಿ 07, ದಿನಾಂಕ 20–8–08

2) ಶ್ರೀ ಸಿ. ನಾಗಯ್ಯ, ಕೆ.ಎ.ಎಸ್. ಇವರ ಉತ್ತರ ದಿನಾಂಕ 14–11–08

3) ಸರ್ಕಾರ ಆದೇಶ ಸಂ. ಸಿಆಸುಇ 236 ಕೆಇವಿ 07, ದಿನಾಂಕ 22–9–2009

4) ಶ್ರೀ ಕೆ. ರಾಜಶೇಖರ್ ನಿವೃತ್ತ ಜಿಲ್ಲಾ ಸೆಷನ್ಸ್ ನ್ಯಾಯಾಧೀಶರು ಇವರ ವಿಚಾರಣಾ ವರದಿ ದಿನಾಂಕ 14–9–10

5) 2ನೇ ಕಾರಣ ಕೇಳುವ ನೋಟೀಸ್ ಸಂ. ಸಿಆಸುಇ 236 ಕೆಇವಿ 07, ದಿನಾಂಕ 20–11–10

6) ಶ್ರೀ ಸಿ. ನಾಗಯ್ಯ, ಕೆ.ಎ.ಎಸ್. ಅಧಿಕಾರಿ ರವರ ಲಿಖಿತ ಉತ್ತರ ದಿನಾಂಕ 25–11–10.

**ಪ್ರಸ್ತಾವನೆ:**

ಶ್ರೀ ಡಾ: ಸಿ. ನಾಗಯ್ಯ, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿರವರು, ಜಿಲ್ಲಾ ಪಂಚಾಯತ್ ಕೋಲಾರ ಇಲ್ಲಿ ಉಪ ಕಾರ್ಯದರ್ಶಿ (ಆಡಳಿತ) ಆಗಿ ಕಾರ್ಯನಿರ್ವಹಿಸುತ್ತಿದ್ದಾಗ ಜಿಲ್ಲಾ ಪಂಚಾಯತ್‌ನ ಕಛೇರಿಗೆ ಅವಶ್ಯವಿರುವ ಗಣಕ ಯಂತ್ರಗಳ ಖರೀದಿಯಲ್ಲಿ ದುರ್ನಡತೆ ಎಸಗಿರುವ ಆರೋಪ ಕುರಿತು ಅವರ ವಿರುಧ ಕ್ರಮ ಸಂ. (1)ರಲ್ಲಿ ಓದಲಾದ ದಿನಾಂಕ 20–8–08ರಲ್ಲಿ ನೋಟಿಸನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 ಮತ್ತು 11ಎ ರನ್ವಯ ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು. ನೋಟೀಸಿಗೆ ಸದರಿ ಅಧಿಕಾರಿಯು ಮೇಲೆ ಕ್ರಮ ಸಂ. (2)ರಲ್ಲಿ ಓದಲಾದ ದಿನಾಂಕ 14–11–2008ರಲ್ಲಿ ಉತ್ತರ ಸಲ್ಲಿಸಿ ತಮ್ಮ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಅವರ ಮೇಲೆ ಹೊರಿಸಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ನಡೆಸಲು ಸರ್ಕಾರವು ತೀರ್ಮಾನಿಸಿ ಮೇಲೆ ಕ್ರಮ ಸಂ. (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಕೆ. ರಾಜಶೇಖರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಅದರಂತೆ ವಿಚಾರಣಾಧಿಕಾರಿಗಳು ಮೇಲೆ ಕ್ರಮ ಸಂ. (4)ರಲ್ಲಿ ಸರ್ಕಾರಕ್ಕೆ ವರದಿಯನ್ನು ನೀಡಿ ಸದರಿ ಅಧಿಕಾರಿಯ ವಿರುದ್ಧ ಮಾಡಲಾದ 4 ಆರೋಪಗಳ ಪೈಕಿ 1 ಮತ್ತು 2ನೇ ಆರೋಪಗಳು ಸಾಬೀತಾಗಿಲ್ಲವೆಂದು, 3ನೇ ಆರೋಪವು ಸಾಬೀತಾಗಿರುತ್ತದೆಂದು ಹಾಗೂ 4ನೇ ಆರೋಪವು ಭಾಗಶಃ ಸಾಬೀತಾಗಿರುತ್ತದೆಂದು ವರದಿ ನೀಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂ. (5)ರಲ್ಲಿ ಎರಡನೇ ಕಾರಣ ಕೇಳುವ ನೋಟೀಸ್‌ನೊಂದಿಗೆ ವಿಚಾರಣಾ ವರದಿಯ ಪ್ರತಿಯನ್ನು ಅಪಾದಿತ ಅಧಿಕಾರಿಗೆ ಒದಗಿಸಿ, ಅವರಿಂದ ಲಿಖಿತ ವಿವರಣೆಯನ್ನು ಪಡೆಯಲಾಗಿದೆ. ಅವರು ನೀಡಿರುವ ಲಿಖಿತ ಅಹವಾಲು ಮತ್ತು ವಿಚಾರಣಾ ವರದಿಯಲ್ಲಿನ ಸಾಕ್ಷ್ಯಾಧಾರಗಳೊಂದಿಗೆ ಪರಿಶೀಲಿಸಲಾಗಿದೆ.

ವಿಚಾರಣಾ ವರದಿಯನ್ನು ದಾಖಲೆಗಳೊಂದಿಗೆ ಪರಿಶೀಲಿಸಿದ್ದಾಗ ಶ್ರೀ ಸಿ. ನಾಗಯ್ಯ ರವರು ಜಿಲ್ಲಾ ಪಂಚಾಯತ್ ಕೋಲಾರ ಇಲ್ಲಿ ಉಪ ಕಾರ್ಯದರ್ಶಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಸಾಂದರ್ಭಿಕ ರಜೆ ಹೋದಾಗ ಕಡತವನ್ನು ಮುಖ್ಯ ಕಾರ್ಯನಿರ್ವಣಾಧಿಕಾರಿಗಳ ಗಮನಕ್ಕೆ ತರದೇ ನೇರವಾಗಿ ಅಧ್ಯಕ್ಷರಿಗೆ ಕಳುಹಿಸಿ ಟೆಂಡರ್ ಕರೆಯುವ ಬದಲು ಡಿ.ಜಿ.ಎಸ್. ಮತ್ತು ಡಿ ಅನುಮೋದಿತ ದರದಲ್ಲಿ ಕಂಪ್ಯೂಟರ್‌ಗಳನ್ನು ಖರೀದಿಸಲು ಅನುಮೋದನೆ ಪಡೆದಿರುತ್ತಾರೆ. ಹಾಗೆಯೇ ಇವರು ಡಿ.ಜಿ.ಎಸ್. ಮತ್ತು ಡಿ ದರದಲ್ಲಿ ಖರೀದಿಗೆ ಅನುಮೋದನೆ ಕೊಡುವಾಗ ಆ ಸಮಯದಲ್ಲಿ ಆ ಕಂಪೆನಿಯ ಕಂಪ್ಯೂಟರ್‌ಗಳಿಗೆ ಡಿ.ಜಿ.ಎಸ್. ಮತ್ತು ಡಿ ದರಗಳು ಇದ್ದವೇ ಎಂಬುದನ್ನು ಪರಿಶೀಲಿಸಬೇಕಾಗಿತ್ತು. ಮುಂದುವರೆದು ದಿನಾಂಕ 31–3–2006ಕ್ಕೆ ಆ ಸಂಸ್ಥೆಯ ಡಿ.ಜಿ.ಎಸ್. ಮತ್ತು ಡಿ ದರಗಳು ಮುಕ್ತಾಯಗೊಂಡಿದ್ದು ಇವರು ದಿನಾಂಕ 6–4–2006ರಂದು ಪ್ರಸ್ತಾವನೆ ಸಲ್ಲಿಸುವಾಗ ಈ ಕಂಪ್ಯೂಟರ್‌ಗಳಿಗೆ ಡಿ.ಜಿ.ಎಸ್. ಮತ್ತು ಡಿ ದರ ಲಭ್ಯವಿರಲಿಲ್ಲ. ಸರಬರಾಜು ಆದೇಶ ಕೊಡುವಾಗಲಾದರೂ ಕೂಡ ಡಿ.ಜಿ.ಎಸ್. ಮತ್ತು ಡಿ ದರದ ಬಗ್ಗೆ ಪರಿಶೀಲಿಸುವುದು ಅಧಿಕಾರಿಯ ಕರ್ತವ್ಯವಾಗಿದ್ದು, ಅದನ್ನು ಕೂಡ ಇವರು

for a Masters programme to lead up to a PhD at the school of Advanced International Studies (SAIS), John Hopkins University, Washington DC. Her main concentration was Conflict Management and Preventive Diplomacy and the thesis topic being "Un and Peacekeeping." The officer was requested to furnish further details in support of her claims. In her letter dated 1-9-2010, the officer has furnished a copy of her selection to the course by the University. In her letter the officer has also stated that she has been selected for the UN and currently serving in Africa and that she is in the process of working on her PhD programme while on job. In her letter dated 25-11-2010, the officer has also furnished the certificate from Johns Hopkins University, wherein it is confirmed that the officer has enrolled for a Masters Programme leading upto a Degree of Doctor of Philosophy PhD in Conflict Management at the Paul H. Nitze School of Advances International Studies (SAIS), Johns Hopkins University, Washington DC, USA.

After careful consideration of the claims of the officer, Government is pleased to order as follows:-

are pleased to consider the period of extraordinary leave availed from 11-10-2006 to 30-4-2010 by Smt. Renuka Chidambaram, IAS (KN 85) as otherwise be admissible under the All India Services (Study Leave) Regulations, 1960, for the purpose of reckoning the said period of extraordinary leave availed, as qualifying service for the purposes of promotion to HAG Scale in terms of Note 2 below Rule 3(1) of IAS (Pay) Rules, 2007. However, this shall not confer any financial benefit to the officer in respect of the said period of extraordinary leave availed by the officer.

By order and in the name of the Governor of Karnataka,

**K.G. ANANTHA**

ಪಿ.ಆರ್. 1249

Under Secretary to Government

DPAR (Services-1)

## Personnel and Administrative Reforms Secretariat

**Corrigendum**

**No. DPAR 512 SAS 2009, Bangalore, Dated 29-1-2011**

**Sub:** Reckoning the period of EOL availed by Smt. Renuka Chidambaram, IAS for the purposes of promotion to HAG.

**Read:** Government Order of even number dated 20-12-2010

In the Government Order of even number dated 20-12-2010.

1) in the order portion the words "in terms of note below rule 3(1) of IAS (Pay) Rules, 2007" shall be read as "in terms of note 2 below rule 3(1) read with rule 5(4) of IAS (Pay) Rules, 2007.
2) The words "However, this shall not confer any financial benefit to the officer in respect of the said period o EOL availed by the officer" shall be deemed to have been deleted.

Except to this extent the Government Order of even number dated 20-12-2010 shall be main unchanged.

By order and in the name of the Governor of Karnataka,

**K.G. ANANTHA)**

ಪಿ.ಆರ್. 1250

Under Secretary to Govenrment,

DPAR (Services-1)

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ವಿಷಯ:** ರಾಜಭಾಷಾ (ವಿಧಾಯೀ) ಆಯೋಗದ ಸದಸ್ಯರನ್ನಾಗಿ ಶ್ರೀ ಹೆಚ್.ಪಿ.ದಾಮೋದರ್, ನಿವೃತ್ತ ಉಪ ನಿರ್ದೇಶಕರು – ಇವರನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ: 1.** ಸರ್ಕಾರದ ಆದೇಶ ಸಂಖ್ಯೆ:ಸಂವ್ಯಶಾಇ 18 ಭಾನಿವಿ 2006, ದಿನಾಂಕ 08.12.2006.

**2.** ಶ್ರೀಮತಿ ಕೆ.ಎನ್. ಜಯಶ್ರೀರವರ ಮನವಿ ದಿ: 7.12.2009 ಹಾಗೂ ರಾಜಿನಾಮೆ ಪತ್ರ ದಿ: 29.05.2010.

**3.** ಶ್ರೀ ಹೆಚ್.ಪಿ. ದಾಮೋದರ್, ನಿವೃತ್ತ ಉಪ ನಿರ್ದೇಶಕರು – ಇವರ ಮನವಿ ದಿನಾಂಕ: 19.01.2011

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗವನ್ನು ಪುನರ್ ರಚಿಸಿ ದಿನಾಂಕ: 08.12.2009ರಿಂದ 3 ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಪ್ರಸ್ತಾವನೆಯಲ್ಲಿ ಆಯೋಗದ ಸದಸ್ಯರಾಗಿ ನೇಮಕಗೊಂಡಿದ್ದ ಶ್ರೀಮತಿ ಕೆ.ಎನ್.ಜಯಶ್ರೀರವರು ಅನಾರೋಗ್ಯದ ಕಾರಣ ಮನವಿಯೊಂದಿಗೆ ಆಯೋಗದ ಸದಸ್ಯ ಸ್ಥಾನಕ್ಕೆ ರಾಜೀನಾಮೆ ನೀಡಿರುತ್ತಾರೆ, ಇವರ ರಾಜೀನಾಮೆಯನ್ನು ಕಡತ ಸಂಖ್ಯೆ: ಸಂವ್ಯಶಾಇ 52 ಭಾನಿವಿ 2009 ರಲ್ಲಿ ಮಾನ್ಯ ಸಚಿವರು ಅಂಗೀಕರಿಸಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಪ್ರಸ್ತಾವನೆಯಲ್ಲಿ ಶ್ರೀ ಹೆಚ್.ಪಿ. ದಾಮೋದರ್, ನಿವೃತ್ತ ಉಪ ನಿರ್ದೇಶಕರವರು ಶ್ರೀಮತಿ ಕೆ.ಎನ್.ಜಯಶ್ರೀಯವರ ರಾಜೀನಾಮೆಯಿಂದ ಖಾಲಿ ಇರುವ ಸದಸ್ಯರ ಹುದ್ದೆಗೆ ನೇಮಕ ಮಾಡುವ ಬಗ್ಗೆ ಮನವಿ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರಿ ಆದೇಶ ಸಂಖ್ಯೆ:ಸಂವ್ಯಶಾಇ 52 ಭಾನಿವಿ 2009, ದಿನಾಂಕ:14.12.2009ರಲ್ಲಿ ನೇಮಕವಾದ ಶ್ರೀಮತಿ ಕೆ.ಎನ್. ಜಯಶ್ರೀರವರ ರಾಜೀನಾಮೆಯಿಂದ ಖಾಲಿಯಾದ ಆಯೋಗದ ಸದಸ್ಯ ಹುದ್ದೆಗೆ ಶ್ರೀ ಹೆಚ್.ಪಿ. ದಾಮೋದರ್, ನಿವೃತ್ತ ಉಪ ನಿರ್ದೇಶಕರವರನ್ನು ನೇಮಕ ಮಾಡಲು ನಿರ್ಣಯಿಸಲಾಗಿದೆ.

ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಸಂವ್ಯಶಾಇ 4 ಭಾನಿವಿ 2011, ಬೆಂಗಳೂರು, ದಿನಾಂಕ: 04.05.2011**

ರಾಜ ಭಾಷಾ (ವಿಧಾಯೀ) ಆಯೋಗಕ್ಕೆ ಶ್ರೀಮತಿ ಕೆ.ಎನ್. ಜಯಶ್ರೀರವರ ರಾಜೀನಾಮೆಯಿಂದ ಖಾಲಿಯಾದ ಆಯೋಗದ ಸದಸ್ಯ ಹುದ್ದೆಗೆ ಶ್ರೀ ಹೆಚ್.ಪಿ. ದಾಮೋದರ್, ನಿವೃತ್ತ ಉಪ ನಿರ್ದೇಶಕರು – ಇವರನ್ನು ರಾಜಭಾಷಾ ವಿಧಾಯೀ ಆಯೋಗದ ಸದಸ್ಯರನ್ನಾಗಿ ನೇಮಕ ಮಾಡಲಾಗಿದೆ.

ಈ ಅವಧಿಯಲ್ಲಿ ಸದರಿ ಸದಸ್ಯರ ಸೇವಾ ಷರತ್ತುಗಳು ಪ್ರಸ್ತುತ ಜಾರಿಯಲ್ಲಿರುವ ಆದೇಶಗಳಿಗೆ ಒಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಜಿ. ಶ್ಯಾಮಲ**

ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

ಪಿ.ಆರ್. 1251

## ಆರ್ಥಿಕ ಸಚಿವಾಲಯ

**ವಿಷಯ:** ಶ್ರೀ ದಯಾನಂದ ಪೂಜಾರಿ, ವಾಣಿಜ್ಯ ತೆರಿಗೆ ಉಪ ಆಯುಕ್ತರು, ಇವರ ವಿರುದ್ಧ ದಾಖಲಾದ **'ಅಕ್ರಮ ಆಸ್ತಿ ಹೊಂದಿರುವ'** ಪ್ರಕರಣದ ಅಭಿಯೋಜನಾ ಆದೇಶ ಕುರಿತು.

**ಓದಲಾಗಿದೆ:** 1. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ:ಲೋಕ್/ ಐಎನ್‌ವಿ(ಜಿ)/ ಎಂ–15/ ಸಿಆರ್–5/2008/ಮಂಗಳೂರು, ದಿನಾಂಕ 11–02–2011.

2 ತನಿಖಾಧಿಕಾರಿಯವರ ಅಂತಿಮ ವರದಿ ದಿನಾಂಕ 22-01-2011.

3 ತನಿಖಾ ದಾಖಲೆಗಳಾದ ಪ್ರಥಮ ವರ್ತಮಾನ ವರದಿ, ಶೋಧನಾ ಪಂಚನಾಮೆಗಳು, ಸಾಕ್ಷಿದಾರರ ಹೇಳಿಕೆಗಳು ಮತ್ತು ತನಿಖಾಧಿಕಾರಿಯ ಅಂತಿಮ ವರದಿಯ ಕಡತಗಳು.

**ಪ್ರಸ್ತಾವನೆ:**

ಶ್ರೀ ದಯಾನಂದ ಪೂಜಾರಿ, ವಾಣಿಜ್ಯ ತೆರಿಗೆ ಉಪ ಆಯುಕ್ತರು, ಇವರ ವಿರುದ್ಧ ಗುನ್ನೆ ಸಂಖ್ಯೆ:05/2008 ರಲ್ಲಿ ಆರಕ್ಷಕ ಅಧೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು, ಇಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯವರ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, (ಪೊಲೀಸ್ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ತಮ್ಮ ಪತ್ರ ದಿನಾಂಕ: 11–02–2011 ರೊಡನೆ ಕಳುಹಿಸುತ್ತಾ, ಆಪಾದಿತ ಅಧಿಕಾರಿಯವರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ 1988ರ ಕಲಂ 19(1)(ಬಿ) ರಡಿಯಲ್ಲಿ ಮಂಜೂರಾತಿಗಾಗಿ ಮೇಲೆ ಓದಲಾಗಿರುವ ಕ್ರಮ ಸಂಖ್ಯೆ: (1)ರ ಪತ್ರದಲ್ಲಿ ಸಕ್ಷಮ ಪ್ರಾಧಿಕಾರವಾದ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, (ಪೊಲೀಸ್ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಮೇಲೆ ಓದಲಾಗಿರುವ ಕ್ರಮ ಸಂಖ್ಯೆ:(1)ರ ಪತ್ರದೊಡನೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ.

I) ಪ್ರಥಮ ವರ್ತಮಾನ ವರದಿ ದಿನಾಂಕ: 30–08–2008.

II) ಶೋಧನಾ ಪಂಚನಾಮೆ

(1) ಮನೆ ನಂ.7–4–478/7, **'ಕಾಂತಾಯ'** ಮಠದಕಣಿ ರಸ್ತೆ, ಸಿಂಡಿಕೇಟ್ ಬ್ಯಾಂಕಿನ ಹತ್ತಿರ, ಬೋಳೂರು ಗ್ರಾಮ, ಮಂಗಳೂರು ನಗರ, ದಿನಾಂಕ: 11–09–2008.

(2) ಶ್ರೀ ದಯಾನಂದ ಪೂಜಾರಿ, ವಾಣಿಜ್ಯ ತೆರಿಗೆ ಉಪ ಆಯುಕ್ತರು, ಇವರ (ಆಡಿಟ್), ಮಂಗಳೂರು, ಕೆಲಸ ನಿರ್ವಹಿಸುತ್ತಿದ್ದ ಕಛೇರಿಯ ಕೊಠಡಿ. ದಿನಾಂಕ:11–09–2008.

(3) ಆರೋಪಿತರ ಪತ್ನಿ ಶ್ರೀಮತಿ ಗಾಯತ್ರಿರವರ ಹೆಸರಿನಲ್ಲಿರುವ ಮೂಡಬಿದ್ರೆ ಹೋಬಳಿಯ ಪಡುಕೋಣಾಜೆಯ ಗೌರಿಶಂಕರ ತೋಟದ ಮನೆ, ದಿನಾಂಕ:11–09–2008.

(4) ಆರೋಪಿತರ ದೂರದ ಸಂಬಂಧಿ ಶ್ರೀ ದಾಸು ಪೂಜಾರಿರವರು ವಾಸವಾಗಿರುವ ಪಾಲಡ್ಕ ಗ್ರಾಮದ ಮೂಡಾಯಿಬೆಟ್ಟು ಮನೆ, ದಿನಾಂಕ 11–09–2008.

(5) ಆರೋಪಿತರಿಗೆ ಸಂಬಂಧಿಸಿದ ಮಂಗಳೂರು ತಾಲ್ಲೂಕು ಮೂಡಬಿದ್ರೆ ಹೋಬಳಿ, ನೆಲ್ಲಿಕಾರು ಗ್ರಾಮ ಡೆಂಜಾರು , ಹೊಸ್ಮಾರು ತೋಟ, ಮತ್ತು ತೋಟದ ಮನೆ ದಿನಾಂಕ: 11–09–2008.

III) ತನಿಖಾಧಿಕಾರಿಯ ಅಂತಿಮ ವರದಿ ದಿನಾಂಕ: 22–01–2011.

IV) ತನಿಖೆಯ ಅಂತಿಮ ವರದಿಯ ಕಡತ

**ಪಂಚ ಸಾಕ್ಷಿದಾರರು:–**

1) ಕು:ಕಿರಣ್, ಪ್ರ.ದ.ಸ., ಸರ್ಕಾರಿ ಪದವಿಪೂರ್ವ ಕಾಲೇಜು, ಕಾರ್ ಸ್ಟ್ರೀಟ್ಸ್, ಮಂಗಳೂರು.
2) ಶ್ರೀ ಎಸ್.ಆರ್.ರಾಜಗೋಪಾಲ್, ದ್ವಿ.ದ.ಸ., ತಾಲ್ಲೂಕು ಆಫೀಸ್, ಮಂಗಳೂರು.
3) ಶ್ರೀ ಪಿ.ದೀಪಕ್, ಪ್ರ.ದ.ಸ., ಸರ್ಕಾರಿ ಪ್ರಾಕ್ಟೀಸಿಂಗ್ ಹೈಸ್ಕೂಲ್, ಮಂಗಳೂರು.
4) ಶ್ರೀಮತಿ ಭಾರತಿ, ವ್ಯವಸ್ಥಾಪಕರು, ತಾಲ್ಲೂಕು ಪಂಚಾಯತ್, ಮಂಗಳೂರು.
5) ಶ್ರೀ ರಾಮಕೃಷ್ಣ ನಾಯಕ್, ಪ್ರ.ದ.ಸ., ತಾಲ್ಲೂಕು ಪಂಚಾಯತ್, ಮಂಗಳೂರು.
6) ಶ್ರೀ ವಿಶ್ವನಾಥ್ ಆರ್.ತೋಟದ, ದ್ವಿ.ದ.ಸ., ಸಮೂಹ ಸಹಾಯಕ ಶಿಕ್ಷಣಾಧಿಕಾರಿಗಳ ಕಛೇರಿ, ಮಂಗಳೂರು,
7) ಶ್ರೀಮತಿ ಮೀನಾಕ್ಷಿ ಎಂ.ಎಸ್., ಜಿಲ್ಲಾ ಉದ್ಯೋಗ ವಿನಿಮಯಾಧಿಕಾರಿಗಳ ಕಛೇರಿ, ಲಾಲ್‌ಬಾಗ್, ಮಂಗಳೂರು.
8) ಶ್ರೀ ಕೆ.ಸುಧಾಕರ, ಪ್ರ.ದ.ಸ., ತಾಲ್ಲೂಕು ಕಛೇರಿ, ಮಂಗಳೂರು.
9) ಶ್ರೀಮತಿ ಗ್ರೆಟ್ಟಾ ಐರೀನ್ ಮಸ್ಕರೇನಸ್, ದ್ವಿ.ದ.ಸ., ತಾಲ್ಲೂಕು ಕಛೇರಿ, ಮಂಗಳೂರು.
10) ಶ್ರೀ ಕೆ.ಸುಧಾಕರ, ಪ್ರ.ದ.ಸ., ತಾಲ್ಲೂಕು ಕಛೇರಿ, ಮಂಗಳೂರು.

**ಪರಿಶೀಲನಾ ಅವಧಿ ದಿನಾಂಕ: 03–03–1997 ರಿಂದ 11–09–2008 ರವರೆಗೆ/ರಲ್ಲಿ ಆರೋಪಿತರು ಮತ್ತು ಅವರ ಕುಟುಂಬ ವರ್ಗದವರ ಹೆಸರಿನಲ್ಲಿರುವ ಆಸ್ತಿಯ ವಿವರಗಳು**

| ಕ್ರ ಸಂ. | ವಿವರ | ಮೊತ್ತ ರೂ.ಗಳಲ್ಲಿ | ಆಸ್ತಿಯು ಯಾರ ಹೆಸರಿನಲ್ಲಿದೆ |
|---|---|---|---|
| 1. | ಮುಡಾಯಿಬೆಟ್ಟು ಮನೆ, ಪಾಲಡ್ಕ ಗ್ರಾಮ, ದ.ಕ.ಜಿಲ್ಲೆ, ಸರ್ವೆ ನಂ.5–4ಪಿ2 ರಲ್ಲಿ 0–62 ಎಕರೆ, 5–5ಪಿ2 ರಲ್ಲಿ 0–46 ಎಕರೆ, 5–7 ರಲ್ಲಿ 1–17 ಎಕರೆ ಸ.ನಂ.11–4 ರಲ್ಲಿ 1–31 ಎಕರೆ, 5–6ಪಿ 4ರಲ್ಲಿ 4–41 ಎಕರೆ ಒಟ್ಟು 7–96 ಎಕರೆ ಸಾಗುವಳಿ ಜಮೀನು | – | ಆರೋಪಿರವರ ದೂರದ ಸಂಬಂಧಿ ಶ್ರೀ ದಾಸುಪೂಜಾರಿ ರವರ ಅನುಭೋಗದಲ್ಲಿರುತ್ತದೆ. |
| 2. | ಮಂಗಳೂರು ನಗರದ ಬೋಳೂರು ಗ್ರಾಮದ ಸರ್ವೆ ನಂ.237/1 ರಲ್ಲಿನ ಜಾಗದಲ್ಲಿ ಕಟ್ಟಿರುವ ಮೂರು ಅಂತಸ್ತಿನ ಮನೆ. | **10,88,209–00** | – |
| 3. | ಮೇಲಿನ ಮನೆಗೆ ವಿದ್ಯುತ್ ಜೋಡಣೆಯ ಖರ್ಚು | **1,11,886–00** | – |
| 4. | ಮೂಡಬಿದ್ರೆ ಪಡುಕೋಣಾಜೆ ಗ್ರಾಮದಲ್ಲಿ ಖರೀದಿಸಿರುವ 6.87 ಎಕರೆ ತೋಟ. | **9,24,448–00** | ಆರೋಪಿತರ ಪತ್ನಿ ಶ್ರೀಮತಿ ಗಾಯಿತ್ರಿರವರ ಹೆಸರಿನಲ್ಲಿ |
| 5. | ಪಡುಕೋಣಾಜೆ ಗ್ರಾಮದಲ್ಲಿ ಸರ್ವೆ ನಂ.56/3, 56/4ಪಿ2, 56/4ಬಿ2 ರಲ್ಲಿ ಒಟ್ಟು 1.16 ಎಕರೆ ಕೃಷಿ ಭೂಮಿ. | **92,000–00** | |
| 6. | ಮೂಡಬಿದ್ರೆ ಪಡುಕೋಣಾಜೆ ಗ್ರಾಮದ ಗೌರಿಶಂಕರ ತೋಟದಲ್ಲಿ ನಿರ್ಮಿಸಿರುವ ಎರಡು ಕಟ್ಟಡಗಳು | **9,87,960–00** | ಆರೋಪಿತರ ಪತ್ನಿ ಶ್ರೀಮತಿ ಗಾಯಿತ್ರಿರವರ ಹೆಸರಿನಲ್ಲಿ |
| 7. | ಮೇಲಿನ ಮನೆಗೆ ವಿದ್ಯುತ್ ಜೋಡಣೆ ಖರ್ಚು | **82,436–00** | |
| 8. | ಮಂಗಳೂರು ತಾಲ್ಲೂಕು ಪದವಿನಂಗಡಿ ಗ್ರಾಮದ ಸರ್ವೆ ನಂ.8–1/ಬಿ–1 ರಲ್ಲಿನ 6.50 ಸೆಂಟ್ಸ್ ಸ್ಥಳ ಮೌಲ್ಯ ರೂ.65000/– | | ಆರೋಪಿತರ ಪತ್ನಿ ಶ್ರೀಮತಿ ಗಾಯಿತ್ರಿರವರ ಹೆಸರಿನಲ್ಲಿ |
| 9. | ಕಾರ್ಪೊರೇಷನ್ ಬ್ಯಾಂಕ್, ಪಾಂಡೇಶ್ವರ, ಮಂಗಳೂರು, ಎಸ್.ಬಿ.ಖಾತೆ ಸಂಖ್ಯೆ: 24907 ನಲ್ಲಿರುವ ಬ್ಯಾಲೆನ್ಸ್ ಮೊತ್ತ. | **08–00** | ಆರೋಪಿತರ ಹೆಸರಿನಲ್ಲಿದೆ. |
| 10. | ವಿಜಯ ಬ್ಯಾಂಕ್, ಬೊಂದೇಲ್ ಬ್ರಾಂಚ್‌ನಲ್ಲಿ ಖಾತೆ ಸಂಖ್ಯೆ: 10340 ನಲ್ಲಿರುವ ಬ್ಯಾಲೆನ್ಸ್ ಮೊತ್ತ. | **1,054–00** | ಆರೋಪಿತರ ಮಗ ಅದಿತ್ ಡಿ.ಜಿ. ರವರ ಹೆಸರಿನಲ್ಲಿದೆ. |
| 11. | ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಜನತಾ ಬಜಾರ್ ಬ್ರಾಂಚ್, ಮಂಗಳೂರು. ಎಸ್.ಬಿ.ಖಾತೆ ಸಂಖ್ಯೆ: 0119005638 ನಲ್ಲಿರುವ ಬ್ಯಾಲೆನ್ಸ್ ಮೊತ್ತ. | **9,332–00** | ಆರೋಪಿತರ ಹೆಸರಿನಲ್ಲಿದೆ. |
| 12. | ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಜನತಾ ಬಜಾರ್ ಬ್ರಾಂಚ್, ಮಂಗಳೂರು. ಎಸ್.ಬಿ.ಖಾತೆ ಸಂಖ್ಯೆ: 54038550700 ನಲ್ಲಿರುವ ಬ್ಯಾಲೆನ್ಸ್ ಮೊತ್ತ. | **2,760–18** | ಆರೋಪಿತರ ಪತ್ನಿ ಶ್ರೀಮತಿ ಗಾಯಿತ್ರಿರವರ ಹೆಸರಿನಲ್ಲಿ |
| 13. | ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಹಂಪನ ಕಟ್ಟೆ, ಮಂಗಳೂರು ಎಸ್.ಬಿ.ಖಾತೆ ಸಂಖ್ಯೆ: 30018569757 ನಲ್ಲಿರುವ ಬ್ಯಾಲೆನ್ಸ್ ಮೊತ್ತ. | **4,951–00** | ಆರೋಪಿತರ ಪತ್ನಿ ಶ್ರೀಮತಿ ಗಾಯಿತ್ರಿರವರ ಹೆಸರಿನಲ್ಲಿ |

| | | | |
|---|---|---|---|
| 14. | ಮಂಗಳೂರು ತಾಲ್ಲೂಕು ಪ್ರಾಥಮಿಕ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ. ಮಂಗಳೂರು ಎಸ್.ಬಿ.ಖಾತೆ ಸಂಖ್ಯೆ: 001336 ನಲ್ಲಿರುವ ಬ್ಯಾಲೆನ್ಸ್ ಮೊತ್ತ. | **250–00** | ಆರೋಪಿತರ ಪತ್ನಿ ಶ್ರೀಮತಿ ಗಾಯಿತ್ರಿರವರ ಹೆಸರಿನಲ್ಲಿ |
| 15. | ಕಲ್ಲಬೆಟ್ಟು ಸೇವಾ ಬ್ಯಾಂಕ್ ನಿಯಮಿತ ಮೂಡಬಿದ್ರೆ ಖಾತೆ ನಂ.2176 ರಲ್ಲಿ ಬ್ಯಾಲೆನ್ಸ್ ಮೊತ್ತ | **24,855–10** | ಆರೋಪಿತರ ಪತ್ನಿ ಶ್ರೀಮತಿ ಗಾಯಿತ್ರಿರವರ ಹೆಸರಿನಲ್ಲಿ |
| 16. | ಸಿಂಡಿಕೇಟ್ ಬ್ಯಾಂಕ್, ಅಶೋಕನಗರ ಬ್ರಾಂಚ್ ಅಕೌಂಟ್ ನಂ.01872190000201 ನಲ್ಲಿ ಬ್ಯಾಲೆನ್ಸ್ ಮೊತ್ತ | **10,430–33** | ಆರೋಪಿತರ ಮಗ ಶ್ರೀ ಅದಿತ್ ಡಿ.ಜಿ.ರವರ ಹೆಸರಿನಲ್ಲಿ |
| 17. | ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಬಂದರು ರಸ್ತೆ, ಮಂಗಳೂರು ಎಸ್.ಬಿ.ಖಾತೆ ಸಂಖ್ಯೆ: 10981154574 ರಲ್ಲಿ ಬ್ಯಾಲೆನ್ಸ್ ಮೊತ್ತ. | **2,52,663–76** | ಆರೋಪಿತರ ಹೆಸರಿನಲ್ಲಿದೆ. |
| 18. | ದಿ ಸೌತ್ ಕೆನರಾ ಗಮರ್ನ್‌ಮೆಂಟ್ ಆಫೀಸರ್ಸ್ ಕೋ–ಆಪರೇಟಿವ್ ಬ್ಯಾಂಕ್ ಲಿ. ಡೊಂಗರಕೇರಿ, ಮಂಗಳೂರು ಎಸ್.ಬಿ.ಖಾತೆ ಸಂಖ್ಯೆ: 3794 ನಲ್ಲಿರುವ ಬ್ಯಾಲೆನ್ಸ್ ಮೊತ್ತ. | **1,320–00** | |
| 19. | ದಿ ಸೌತ್ ಕೆನರಾ ಗಮರ್ನ್‌ಮೆಂಟ್ ಆಫೀಸರ್ಸ್ ಕೋ–ಆಪರೇಟಿವ್ ಬ್ಯಾಂಕ್ ಲಿ,, ಡೊಂಗರಕೇರಿ, ಮಂಗಳೂರು, ಕಡ್ಡಾಯ ಠೇವಣಿ ಖಾತೆ | **3,040–00** | |
| 20. | ಎನ್.ಎಸ್.ಸಿ. ಗಾಗಿ ತೊಡಗಿಸಿರುವ ಮೊತ್ತ | **2,60,000–00** | ಆರೋಪಿತರ ಹೆಸರಿನಲ್ಲಿ |
| 21. | ಸಬ್‌ಪೋಸ್ಟ್ ಕಛೇರಿ, ಕಾರ್‌ಸ್ಟ್ರೀಟ್ ಮಂಗಳೂರು ಆರ್.ಡಿ.ಖಾತೆ ನಂ. 5405777 ರಲ್ಲಿ ತೊಡಗಿಸಿರುವ ಮೊತ್ತ | **30,000–00** | ಆರೋಪಿತರ ಪತ್ನಿ ಶ್ರೀಮತಿ ಗಾಯಿತ್ರಿರವರ ಹೆಸರಿನಲ್ಲಿ |
| 22. | ಆರ್.ಡಿ.ಖಾತೆ ನಂ. 5411254 ರಲ್ಲಿ ತೊಡಗಿಸಿರುವ ಮೊತ್ತ | **1,000–00** | ಆರೋಪಿತರ ಪತ್ನಿ ಶ್ರೀಮತಿ ಗಾಯಿತ್ರಿರವರ ಹೆಸರಿನಲ್ಲಿ |
| 23. | ಆರ್.ಡಿ.ಖಾತೆ ನಂ. 5404316 ರಲ್ಲಿ ತೊಡಗಿಸಿರುವ ಮೊತ್ತ | **6,000–00** | ಆರೋಪಿತರ ಮಗ ಮೋಹಿತ್‌ಚಂದ್ರರವರ ಹೆಸರಿನಲ್ಲಿ |
| 24. | ಆರ್.ಡಿ.ಖಾತೆ ನಂ. 5410389 ರಲ್ಲಿ ತೊಡಗಿಸಿರುವ ಮೊತ್ತ | **7,000–00** | ಆರೋಪಿತರ ಮಗ ಅದಿತ್ ಡಿ.ಜಿ.ರವರ ಹೆಸರಿನಲ್ಲಿ |
| 25. | ಆರ್.ಡಿ.ಖಾತೆ ನಂ. 5410390 ರಲ್ಲಿ ತೊಡಗಿಸಿರುವ ಮೊತ್ತ | 7,000–00 | ಆರೋಪಿತರ ಮಗ ಮೋಹಿತ್‌ಚಂದ್ರರವರ ಹೆಸರಿನಲ್ಲಿ |
| 26. | ಕ್ಯಾನ್‌ಫಿನ್ ಹೋಮ್ಸ್, ಮಂಗಳೂರು, ಆರ್.ಡಿ.ಖಾತೆ ನಂ. ಹೆಚ್‌ಎಲ್‌ಎ–59 ರಲ್ಲಿ ಜಮಾ ಮಾಡಿರುವ ಮೊತ್ತ | 89,000–00 | ಆರೋಪಿತರ ಹೆಸರಿನಲ್ಲಿ |
| 27. | ಕ್ಯಾಪಿಟಲ್ ಗೈನ್ ಟ್ಯಾಕ್ಸ್ ಎಕ್ಸಂಪಷನ್ ಬಾಂಡ್ | **2,80,000–00** | ಆರೋಪಿತರ ಹೆಸರಿನಲ್ಲಿ |
| 28. | ಕಲ್ಲಬೆಟ್ಟು ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ ಇದರಲ್ಲಿ ತೊಡಗಿಸಿರುವ ಷೇರು ಮೊತ್ತ | **1,000–00** | ಆರೋಪಿತರ ಪತ್ನಿ ಶ್ರೀಮತಿ ಗಾಯಿತ್ರಿರವರ ಹೆಸರಿನಲ್ಲಿ |
| 29. | ದಿ ಸೌತ್ ಕೆನರಾ ಗವರ್ನ್‌ಮೆಂಟ್ ಆಫೀಸರ್ಸ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಡೊಂಗರಕೇರಿ, ಮಂಗಳೂರು, ಇಲ್ಲಿ ಖಾತೆ ನಂ.13348 ರಲ್ಲಿ ಪಾಲು ಬಂಡವಾಳ | **10,000–00** | ಆರೋಪಿತರ ಹೆಸರಿನಲ್ಲಿ |
| 30. | ಮಂಗಳೂರು ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ. ಮಂಗಳೂರು ಇದರಲ್ಲಿ ಹೊಂದಿರುವ ಷೇರು ಮೊತ್ತ. | **14,200–00** | ಆರೋಪಿತರ ಪತ್ನಿ ಶ್ರೀಮತಿ ಗಾಯಿತ್ರಿರವರ ಹೆಸರಿನಲ್ಲಿ |
| 31. | ನ್ಯಾಷನಲ್ ಫೆಡರೇಷನ್ ಆಫ್ ಬ್ಲೈಂಡ್‌ಗೆ ಕಟ್ಟಿದ ಹಣ | **26,100–00** | ಆರೋಪಿತರ ಹೆಸರಿನಲ್ಲಿ |
| 32. | ಎಸ್.ಬಿ.ಐ. ಮ್ಯಾಗ್ನಂ ಟ್ಯಾಕ್ಸ್ ಗೈನ್ ಸ್ಕೀಮ್‌ಗೆ ಕಟ್ಟಿದ ಹಣ | **20,000–00** | ಆರೋಪಿತರ ಹೆಸರಿನಲ್ಲಿ |
| 33. | ಸಿಂಡಿಕೇಟ್ ಬ್ಯಾಂಕ್, ಅಶೋಕ ನಗರ ಬ್ರಾಂಚ್, ಮಂಗಳೂರು, 405–ವಿಕಾಸ್ ಕ್ಯಾಶ್ ಸರ್ಟಿಫಿಕೇಟ್ ಖಾತೆಯಲ್ಲಿ ತೊಡಗಿಸಿದ ಮೊತ್ತ | **15,000–00** | ಆರೋಪಿತರ ಮಗ ಶ್ರೀ ಅದಿತ್ ಡಿ.ಜಿ. ರವರ ಹೆಸರಿನಲ್ಲಿ |

| | | | |
|---|---|---|---|
| 34. | ಐಸಿಐಸಿಐ ಟ್ಯಾಕ್ಸ್ ಸೇವಿಂಗ್ ಬಾಂಡ್‌ಗೆ ತೊಡಗಿಸಿದ ಮೊತ್ತ | **10,000–00** | |
| 35. | ಕೆಎ 19 ಯು 8989 ಹೊಂಡಾ ಆಕ್ಟಿವಾ ದ್ವಿಚಕ್ರ ವಾಹನ | **37,452–00** | |
| 36. | ಕೆಎ 19 ಪಿ 5989 ಮಾರುತಿ ಆಲ್ಟೋ ಕಾರು | **3,04,793–00** | |
| 37. | ಮನೆ ಶೋಧನೆ ಸಮಯ ದೊರೆತ ಒಟ್ಟು ನಗದು ಹಣ | **15,440–00** | |
| 38. | ಚಿನ್ನಾಭರಣ | **2,53,648–00** | |
| 39. | ಮಹಜರು ಸಮಯ ದೊರೆತ ಬೆಳ್ಳಿ ವಸ್ತುಗಳು (ಸ್ತ್ರೀಧನ ಹಾಗೂ ಉಡುಗೊರೆ) ಒಟ್ಟು 1552.20 ಗ್ರಾಂ. | – | |
| 40. | ಮಂಗಳೂರು ಮಠದ ಕಣಿ ರಸ್ತೆಯ ಕಾಂತಾಯಾ ಮನೆಯಲ್ಲಿ ಮಹಜರು ಸಮಯ ದೊರೆತ ವಸ್ತುಗಳು | **6,49,174–00** | |
| 41. | ಕಡುಕೋಣಾಜೆಯಲ್ಲಿರುವ ತೋಟದ ಮನೆಯಲ್ಲಿ ಮಹಜರು ಸಮಯ ದೊರೆತ ವಸ್ತುಗಳು | **2,96,244–00** | |
| | ಒಟ್ಟು ರೂ. | **59,30,614–37** | |

**ಆರೋಪಿತರಾದ ಶ್ರೀ ದಯಾನಂದ ಪೂಜಾರಿ ಮತ್ತು ಅವರ ಕುಟುಂಬದವರ ಹೆಸರಿನಲ್ಲಿರುವ ಆದಾಯದ ವಿವರಗಳು:**

| ಕ್ರಮ ಸಂಖ್ಯೆ | ಆದಾಯದ ಮೂಲಗಳು | ರೂ.ಗಳು |
|---|---|---|
| 1. | ಸಂಬಳದ ಆದಾಯ ಅಂದಾಜು (ನಿವ್ವಳ ವೇತನ) | 13,69,262–00 |
| 2. | ಕೃಷಿ ಆದಾಯ ಮತ್ತು ಇತರೇ ಆದಾಯಗಳು | 30,41,247–08 |
| | **ಒಟ್ಟು ರೂ.** | 44,10,509–08 |

**ಆರೋಪಿತರಾದ ಶ್ರೀ ದಯಾನಂದ ಪೂಜಾರಿ ಮತ್ತು ಅವರ ಕುಟುಂಬದವರ ಖರ್ಚಿನ ವಿವರಗಳು:**

| ಕ್ರ.ಸಂ | ಖರ್ಚಿನ ವಿವರಗಳು | ರೂ.ಗಳಲ್ಲಿ |
|---|---|---|
| 1. | ಶ್ರೀಮತಿ ಗಾಯಿತ್ರಿರವರ ಹೆಸರಿನಲ್ಲಿರುವ ಜೀವವಿಮಾ ಪಾಲಿಸಿ ಸಂಖ್ಯೆ:6248104444ರ ಮೇಲೆ ಪಾವತಿಸಿರುವ ಮೊತ್ತ | **56,904–00** |
| 2. | ಆರೋಪಿತರ ಮಗ ಶ್ರೀ ಮೋಹಿತ್ ಚಂದ್ರ ರವರ ಹೆಸರಿನಲ್ಲಿ ಇನ್ಸೂರೆನ್ಸ್ ಪಾಲಿಸಿ ಸಂಖ್ಯೆ:624853346ರ ಮೇಲೆ ಪಾವತಿಸಿರುವ ಪ್ರೀಮಿಯಮ್ ಮೊತ್ತ. | **20,000–00** |
| 3. | ಆರೋಪಿತರ ಪತ್ನಿ ಶ್ರೀಮತಿ ಗಾಯಿತ್ರಿರವರ ಹೆಸರಿನಲ್ಲಿರುವ ಇನ್ಸೂರೆನ್ಸ್ ಪಾಲಿಸಿ ಸಂಖ್ಯೆ:622501381ರ ಮೇಲೆ ಪಾವತಿಸಿರುವ ಪ್ರೀಮಿಯಮ್ ಮೊತ್ತ. | **11,277–00** |
| 4. | ಆರೋಪಿತರ ಪತ್ನಿ ಶ್ರೀಮತಿ ಗಾಯಿತ್ರಿರವರ ಹೆಸರಿನಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಹಂಪನಕಟ್ಟೆ ಬ್ರಾಂಚ್‌ನಲ್ಲಿ ಪಡೆದಿರುವ ಸಾಲಕ್ಕೆ ಎಸ್.ಬಿ.ಐ. ಜೀವವಿಮಾ ಇನ್ಸೂರೆನ್ಸ್ ಪಾಲಿಸಿ ಮೇಲೆ ಕಂತು ಪಾವತಿ | **31,517–00** |
| 5. | ಆರೋಪಿತರು ಐಸಿಐಸಿಐ ಪ್ರೊಡೆನ್ಸಿಯಲ್ ಜೀವವಿಮಾ ಪಾಲಿಸಿ ಸಂಖ್ಯೆ: 00321510ಕ್ಕೆ ತೊಡಗಿಸಿದ ಮೊತ್ತ | **60,000–00** |
| 6. | ಆರೋಪಿತರು ಪ್ರತ್ಯೇಕವಾಗಿ ಆದಾಯ ತೆರಿಗೆ ಪಾವತಿಸಿದ ಮೊತ್ತ | **4,614–00** |
| 7. | ಆರೋಪಿತರು ಮನೆ ತೆರಿಗೆ ಸಂಬಂಧ ಪಾವತಿಸಿದ ತೆರಿಗೆ ಮೊತ್ತ | **9,604–00** |
| 8. | ಆರೋಪಿತರ ಪತ್ನಿ ಶ್ರೀಮತಿ ಗಾಯಿತ್ರಿರವರ ಹೆಸರಿನಲ್ಲಿರುವ ಪಡುಕೋಣಾಜೆ ಗ್ರಾಮದ ಮನೆಯ ಬಾಬ್ತು ಪಾವತಿ ಮಾಡಿದ ತೆರಿಗೆ ಮೊತ್ತ | **517–00** |
| 9. | ಆರೋಪಿತರ ಮನೆ ನೀರಿನ ಬಾಬ್ತು ಬಿಲ್ ಪಾವತಿಸಿದ ಮೊತ್ತ | **7,470–00** |
| 10. | ಕೆ.ಎ–19–ಯು–8989 ಹೋಂಡಾ ಆಕ್ಟೀವಾ ವಾಹನಕ್ಕೆ ವಿಮಾ ಕಂತು ಪಾವತಿಸಿದ ಮೊತ್ತ | **1,578–00** |
| 11. | ಕೆ.ಎ–19–ಯು–8989ಹೋಂಡಾ ಆಕ್ಟೀವಾ ನೋಂದಣಿ ಸಮಯ ಪಾವತಿಸಿದ ಒಟ್ಟು ಮೊತ್ತ | **2,944–00** |

| | | |
|---|---|---|
| 12. | ಕೆ.ಎ-19-ಪಿ 5989 ಮಾರುತಿ ಆಲ್ಟೋ ಕಾರಿನ ನೋಂದಣಿ ಸಮಯ ಪಾವತಿಸಿದ ಮೊತ್ತ | **30,475-00** |
| 13. | ಕೆ.ಎ-19-ಯು-8989ಹೋಂಡಾ ಆಕ್ಟೀವಾ ವಾಹನದ ನಿರ್ವಹಣಾ ವೆಚ್ಚ | **27,400-00** |
| 14. | ಕೆ.ಎ-19-ಪಿ 5989 ಮಾರುತಿ ಆಲ್ಟೋ ಕಾರಿನ ನಿರ್ವಹಣಾ ವೆಚ್ಚ | **87,380-00** |
| 15. | ಕೆ.ಎ-19-ಪಿ 5989 ಕಾರನ್ನು ಖಾಸಗಿಯಾಗಿ ದುರಸ್ತಿ ಮಾಡಿಸಿದ ವೆಚ್ಚ | **14,550-00** |
| 16. | ಕೆ.ಎ-25ಕ್ಯೂ 90 ದ್ವಿಚಕ್ರ ವಾಹನವನ್ನು ಖಾಸಗಿಯಾಗಿ ದುರಸ್ತಿ ಮಾಡಿಸಿದ ವೆಚ್ಚ | **350-00** |
| 17. | ಆರೋಪಿತರ ಪತ್ನಿ ಶ್ರೀಮತಿ ಗಾಯಿತ್ರಿರವರ ಹೆಸರಿನಲ್ಲಿರುವ ಮನೆಗೆ ಹಾಗೂ ಪಂಪ್‌ಸೆಟ್ಟುಗಳ ವಿದ್ಯುಚ್ಛಕ್ತಿ ಹಾಗೂ ಮಾಪಕ ಠೇವಣಿ ಮೊತ್ತ | **10,390-00** |
| 18. | ಆರೋಪಿತರ ಅತ್ತೆ ಶ್ರೀಮತಿ ಎಲ್.ಉಮಾದೇವಿರವರ ಹೆಸರಿನಲ್ಲಿರುವ ವಿದ್ಯುತ್‌ಚ್ಛಕ್ತಿ ಸೆಕ್ಯುರಿಟಿ ಮತ್ತು ಮೀಟರ್ ಸೆಕ್ಯುರಿಟಿ ಮೊತ್ತ | **8,030-00** |
| 19. | ಆರೋಪಿತರು ಮಾರ್ಚ್ 1997 ರಿಂದ ಧಾಳಿ ದಿನಾಂಕದವರೆಗೆ ಒಟ್ಟು ವಿದ್ಯುತ್ ಉಪಯೋಗಿಸಿದ ಖರ್ಚು | **48,000-00** |
| 20 | ಆರೋಪಿತರು ಮಾರ್ಚ್ 1997 ರಿಂದ ಧಾಳಿ ದಿನಾಂಕದವರೆಗೆ ಒಟ್ಟು ಟೆಲಿಫೋನ್ ಬಿಲ್ಲಿನ ಖರ್ಚು | **45,050-00** |
| 21. | ಆರೋಪಿತರ ಇಬ್ಬರು ಗಂಡು ಮಕ್ಕಳ ವಿದ್ಯಾಭ್ಯಾಸದ ಖರ್ಚು | **1,24,410-00** |
| 22. | ಆರೋಪಿತರು ದಿ:3-3-1997 ರಿಂದ ದಾಳಿ ದಿನಾಂಕ 11-09-2008 ರವರೆಗೆ ಮಾಡಿರುವ ಕೌಟುಂಬಿಕ ಆಹಾರ ಪದಾರ್ಥ ಖರ್ಚು | **6,07,387-00** |
| 23. | ಆರೋಪಿತರ ಹೆಸರಿನಲ್ಲಿ ದಿ ಸೌತ್ ಗೌರ್ನಮೆಂಟ್ ಆಫೀಸರ್ಸ್ ಕೋ-ಆಪರೇಟಿವ್ ಬ್ಯಾಂಕ್ ಲಿ. ಡೊಂಗರಕೇರಿ, ಮಂಗಳೂರಿನಲ್ಲಿ ಪಡೆದಿರುವ ಸಾಲ ಮತ್ತು ಬಡ್ಡಿ ಮರುಪಾವತಿ ಒಟ್ಟು ಮೊತ್ತ | **1,31,331-00** |
| 24. | ಆರೋಪಿತರ ಪತ್ನಿ ಶ್ರೀಮತಿ ಗಾಯತ್ರಿರವರ ಹೆಸರಿನಲ್ಲಿ ಮಂಗಳೂರು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿಯಮಿತ ಖಾತೆ ನಂ.ಎಂ.ಎಲ್.ಎಸ್.ಪಿ 000099, ಎಂ.ಪಿ.ಇ.ಎನ್ 000011, ಎಂ.ಡಬ್ಲ್ಯೂಎಸ್‌ಟಿ 000068, ಎಂ.ವೈ.ಎಸ್.ಡಿ 0000449ಗೆ ನೀಡಿರುವ ಬಡ್ಡಿ ಪಾವತಿ | **9,018-00** |
| 25. | ಆರೋಪಿತರ ಪತ್ನಿ ಶ್ರೀಮತಿ ಗಾಯತ್ರಿರವರ ಹೆಸರಿನಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಹಂಪನಕಟ್ಟೆ ಬ್ರಾಂಚ್, ಮಂಗಳೂರು, ಸಾಲ ಖಾತೆ ನಂ. 30019325801 ರಲ್ಲಿ ಪಡೆದಿರುವ ಸಾಲಕ್ಕೆ ಅಸಲು ಹಾಗೂ ಬಡ್ಡಿ ಪಾವತಿ. | **5,94,445-00** |
| 26. | ಆರೋಪಿತರ ಪತ್ನಿ ಶ್ರೀಮತಿ ಗಾಯತ್ರಿರವರ ಹೆಸರಿನಲ್ಲಿ ಮಂಗಳೂರು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್, ಮಂಗಳೂರಿನಲ್ಲಿ ಸಾಲ ಪಡೆಯುವ ಸಂಬಂಧ ಪಾವತಿಸಿದ ಶುಲ್ಕ. | **5,410-00** |
| 27. | ಆರೋಪಿತರ ಪತ್ನಿ ಶ್ರೀಮತಿ ಗಾಯತ್ರಿರವರ ಹೆಸರಿನಲ್ಲಿ ಪದವಿನಂಗಡಿ ಜಾಗದಲ್ಲಿ ನಿರ್ಮಿಸಿದ ಬಾವಿಯ ಖರ್ಚು | **9,933-00** |
| 28. | ಆರೋಪಿತರ ಪತ್ನಿ ಶ್ರೀಮತಿ ಗಾಯತ್ರಿರವರ ಹೆಸರಿನಲ್ಲಿ ಬೋಳೂರು ಗ್ರಾಮದ ಸರ್ವೆ ನಂ.237/1ರ ಜಾಗವನ್ನು ಸೆಟ್ಲಮೆಂಟ್ ಡೀಡ್ ನೋಂದಾವಣೆ ಸಮಯದ ಖರ್ಚು | **1,930-00** |
| 29. | ಆರೋಪಿತರ ಪತ್ನಿ ಶ್ರೀಮತಿ ಗಾಯತ್ರಿರವರ ಹೆಸರಿನಲ್ಲಿ ಪಡುಕೋಣಾಜೆ ಗ್ರಾಮದಲ್ಲಿ ಸರ್ವೆ ನಂ. 56/3, 56/4ಪಿ2, 56/4ಬಿ2 ರಲ್ಲಿ ಒಟ್ಟು 1.16 ಎಕರೆ ಕೃಷಿ ಜಾಗದ ನೋಂದಣಿ ಖರ್ಚು. | **9,280-00** |
| 30 | ಆರೋಪಿತರ ಪತ್ನಿ ಶ್ರೀಮತಿ ಗಾಯತ್ರಿರವರ ಹೆಸರಿನಲ್ಲಿ ಮೂಡಬಿದ್ರೆ ಪಡುಕೋಣಾಜೆ ಗ್ರಾಮದಲ್ಲಿ ಸರ್ವೆ ನಂ.90-1ಪಿ, 61-2ಬಿಪಿ1, 61-2ಸಿಪಿ3, 61-6, 61-5, 61-3, 91-1ಪಿ2 ರಲ್ಲಿಯ 6.87 ಎಕರೆ ಜಾಗದ ನೋಂದಾವಣೆ ಸಮಯದ ಖರ್ಚು. | **53,929-00** |
| 31. | ಮನೆ ಬಾಡಿಗೆ ಬಗ್ಗೆ ಆರೋಪಿತರು ಭರಿಸಿದ ಖರ್ಚು | **1,95,120-00** |
| 32. | ಆರೋಪಿತರು ಖರೀದಿಸಿದ ಜರ್ಮನ್ ಶಫರ್ಡ್ ನಾಯಿಯ ಮೈಂಟೆನೆನ್ಸ್ ಮತ್ತು ಇತರೇ ಖರ್ಚು | **65,000-00** |
| 33. | ಆರೋಪಿತರು ತಮ್ಮ ಮದುವೆಯ ವಾರ್ಷಿಕ ದಿನಾಚರಣೆಯ ಬಗ್ಗೆ ಚೆಕ್ ಅವಧಿಯಲ್ಲಿ ಮಾಡಿದ ಖರ್ಚು | **2,480-00** |
| 34. | ಮಕ್ಕಳ ಹಾಗೂ ತನ್ನ ಹುಟ್ಟು ಹಬ್ಬದ ಬಗ್ಗೆ ಚೆಕ್ ಅವಧಿಯಲ್ಲಿ ಭರಿಸಿದ ಖರ್ಚು | **14,465-00** |
| 35. | ದಿನಾಂಕ: 12-09-2005 ರಂದು ಮನೆಯಲ್ಲಿ ನಡೆಸಿದ ಕಾರ್ಯಕ್ರಮದ ಊಟದ ಖರ್ಚು | **4,875-00** |

| | | |
|---|---|---|
| 36. | ಅಡುಗೆ ಅನಿಲ ಬಾಬ್ತು ಠೇವಣಿಯಾಗಿ ಆರೋಪಿತ ಅಧಿಕಾರಿಯ ಪತ್ನಿ ಹೆಸರಿನಲ್ಲಿ ಶ್ರೀ ಗಣೇಶ್ ಗ್ಯಾಸ್ ಏಜೆನ್ಸಿ, ಕರಂಗಲಪಾಡಿ, ಮಂಗಳೂರು, ಇವರಿಗೆ ಪಾವತಿಸಿರುವ ಮೊತ್ತ | 1,900–00 |
| 37. | ಅಡಿಗೆ ಅನಿಲ ಬಾಬ್ತು ಮಾಡಿದ ಖರ್ಚು | 13,570–00 |
| 38. | ಕೇಬಲ್ ಉಪಯೋಗಿಸಿದ ಬಗ್ಗೆ ಮಾಡಿದ ಖರ್ಚು | 19,160–00 |
| 39. | ಹೂ–ತೋಟದ ಬಗ್ಗೆ ಮಾಡಿದ ಖರ್ಚು | 360–00 |
| 40. | ಪಡುಕೋಣಾಜೆ ಗ್ರಾಮದಲ್ಲಿ ತನ್ನ ಹೆಂಡತಿ ಹೆಸರಿನಲ್ಲಿರುವ ಜಮೀನಿನ ಕೃಷಿ ಅಭಿವೃದ್ಧಿಗಾಗಿ ಮಾಡಿರುವ ಖರ್ಚು | 4,29,749–00 |
| 41. | ಪಾಲಡ್ಕ ಗ್ರಾಮದಲ್ಲಿನ ಜಮೀನಿನ ಕೃಷಿ ಅಭಿವೃದ್ಧಿಗೆ ಮಾಡಿದ ಖರ್ಚು | 3,72,000–00 |
| 42. | ಕಲ್ಲಬೆಟ್ಟುವಿನಲ್ಲಿ ದನ ಸಾಕಾಣಿಕೆಯ ಬಗ್ಗೆ ಮತ್ತು ಪಶು ಆಹಾರ ಖರೀದಿ ಬಗ್ಗೆ ಮಾಡಿರುವ ಖರ್ಚು | 65,202–00 |
| 43. | ಆರೋಪಿತರ ತಾಯಿಯ ವೈದ್ಯಕೀಯ ಚಿಕಿತ್ಸೆ ಬಗ್ಗೆ ಮಾಡಿದ ಖರ್ಚು | 1,00,000–00 |
| 44. | ಆರೋಪಿತರ ಮಗ ಮೋಹಿತ್‌ಚಂದ್ರ ಇವರ ಚಿಕಿತ್ಸೆ ಬಗ್ಗೆ ಮಾಡಿದ ಖರ್ಚು | 2,079–00 |
| 45. | ಆರೋಪಿತರು ತನ್ನ ಅತ್ತೆ ಶ್ರೀಮತಿ ಎಲ್.ಉಮಾದೇವಿ ಇವರಿಗೆ ನೀಡಿದ ಸಾಲ | 1,00,000–00 |
| 46. | ಫ್ರಿಜ್ ರಿಪೇರಿ ಖರ್ಚು | 2,350–00 |
| 47. | ಇತರೇ ಖರ್ಚು | 5,50,000–00 |
| | ಒಟ್ಟು ರೂ. | 39,63,433–00 |

**ಆರೋಪಿತರಾದ ಶ್ರೀ ದಯಾನಂದ ಪೂಜಾರಿ ತಮ್ಮ ಎಲ್ಲಾ ಬಲ್ಲ ಮೂಲಗಳಿಂದ ಬಂದಿರುವ ಆದಾಯಕ್ಕಿಂತ ಹೆಚ್ಚಿನ ಆಸ್ತಿಯನ್ನು ಸಂಪಾದಿಸಿರುವ ಬಗ್ಗೆ ಅಂಕಿ ಅಂಶಗಳ ಪಟ್ಟಿ**

| | |
|---|---|
| ಒಟ್ಟು ಆಸ್ತಿ | 59,30,614–37 |
| ಒಟ್ಟು ಖರ್ಚು | 39,63,433–00 |
| ಒಟ್ಟು ಆಸ್ತಿ ಮತ್ತು ಖರ್ಚು | 98,94,047–37 |
| ಒಟ್ಟು ಆದಾಯ | 44,10,509–08 |
| ಒಟ್ಟು ಅಕ್ರಮ ಆಸ್ತಿ | 54,83,538–29 |

ಶ್ರೀ ದಯಾನಂದ ಪೂಜಾರಿ, ವಾಣಿಜ್ಯ ತೆರಿಗೆ ಉಪ ಆಯುಕ್ತರು, ಇವರು ನಿಗದಿತ ಆದಾಯಕ್ಕಿಂತ ಹೆಚ್ಚುವರಿಯಾಗಿ ಆಸ್ತಿ ಪಾಸ್ತಿ ಹೊಂದಿರುವ ಬಗ್ಗೆ ಅವರ ವಿರುದ್ಧ ಮಂಗಳೂರು, ಲೋಕಾಯುಕ್ತ ಠಾಣೆ ಮೊಕದ್ದಮೆ ಸಂಖ್ಯೆ:05/2008 ರಲ್ಲಿ ದಿನಾಂಕ: 10–09–2008 ರಂದು ಕಲಂ 13(1)(ಇ) ಜೊತೆಗೆ 13(2)ರ ರೀತ್ಯ ಪ್ರಕರಣವನ್ನು ದಾಖಲು ಮಾಡಿಕೊಂಡು ತನಿಖೆಯನ್ನು ಕೈಗೊಂಡಿರುತ್ತಾರೆ.

ಮೇಲ್ಕಂಡ ವಿವರಗಳಿಂದ ಆರೋಪಿ ಶ್ರೀ ದಯಾನಂದ ಪೂಜಾರಿ, ವಾಣಿಜ್ಯ ತೆರಿಗೆ ಉಪ ಆಯುಕ್ತರು, ಇವರು ತಮ್ಮ ಎಲ್ಲಾ ಬಲ್ಲ ಮೂಲಗಳ ಆದಾಯಕ್ಕಿಂತ ಶೇ. 124.32 ರಷ್ಟು ಅಕ್ರಮ ಆಸ್ತಿ ಹೊಂದಿರುವುದು ಮತ್ತು ಖರ್ಚುಗಳನ್ನು ಮಾಡಿರುವುದು ತನಿಖೆಯಿಂದ ಕಂಡುಬಂದಿದ್ದು, ಆಪಾದಿತರು ಲಂಚ ನಿರೋಧ ಕಾಯ್ದೆ 1988ರ ಕಲಂ 13(1)(ಇ) ಜೊತೆಗೆ 13(2) ರಡಿಯಲ್ಲಿ ಅಪರಾಧವೆಸಗಿರುವುದು ಗೋಚರವಾಗಿರುತ್ತದೆ. ಆಕಾರಣ ಆರೋಪಿತರನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 13(1)(ಇ) ಜೊತೆಗೆ 13(2) ರಡಿಯಲ್ಲಿ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಗಗೊಳಿಸಲು ಸಾಕಷ್ಟು ಸಾಕ್ಷಿ ಪುರಾವೆಗಳು ಲಭ್ಯವಿರುತ್ತದೆ ಆದ್ದರಿಂದ ಆರೋಪಿ ಶ್ರೀ ದಯಾನಂದ ಪೂಜಾರಿ, ವಾಣಿಜ್ಯ ತೆರಿಗೆ ಉಪ ಆಯುಕ್ತರು, ಇವರು ಮೇಲ್ಕಂಡ ಕಾಯ್ದೆಯಡಿಯಲ್ಲಿ ಅಭಿಯೋಗಗೊಳಿಸಲು ಅರ್ಹರಿರುತ್ತಾರೆ.

ಆದ್ದರಿಂದ ಲಂಚ ನಿರೋಧ ಕಾಯ್ದೆ 1988ರ ಕಲಂ 13(1)(ಇ) ಜೊತೆಗೆ 13(2) ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಶ್ರೀ ದಯಾನಂದ ಪೂಜಾರಿ, ವಾಣಿಜ್ಯ ತೆರಿಗೆ ಉಪ ಆಯುಕ್ತರು, ಇವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ) ರನ್ವಯ ಅನುಮತಿ ನೀಡುವಂತೆ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರುರವರು ಕೋರಿರುತ್ತಾರೆ.

ಮೇಲ್ಕಂಡ ವಿವರಗಳಿಂದ ಆರೋಪಿತ ಸರ್ಕಾರಿ ಅಧಿಕಾರಿಯಾದ ಶ್ರೀ ದಯಾನಂದ ಪೂಜಾರಿ, ವಾಣಿಜ್ಯ ತೆರಿಗೆ ಉಪ ಆಯುಕ್ತರು, ತಮ್ಮ ಎಲ್ಲಾ ಬಲ್ಲ ಮೂಲಗಳ ಆದಾಯಕ್ಕಿಂತ ರೂ. 124.32 ರಷ್ಟು ಅಕ್ರಮ ಆಸ್ತಿ ಹೊಂದಿರುವುದು ಮತ್ತು ಖರ್ಚುಗಳನ್ನು ಮಾಡಿರುವುದು ತನಿಖೆಯಿಂದ ಕಂಡುಬಂದಿದ್ದು, ಆರೋಪಿತರು ಲಂಚ ನಿರೋಧಕ ಕಾಯ್ದೆ 1988ರ ಕಲಂ 13(1)(ಇ) ಸಹವಾಚನ 13(2) ರಡಿಯಲ್ಲಿ ಅಪರಾಧ ಎಸಗಿರುವುದು ಸ್ಪಷ್ಟವಾಗಿ ಗೋಚರವಾಗುತ್ತದೆ. ಆದಕಾರಣ, ಲಂಚ ನಿರೋಧಕ ಕಾಯ್ದೆ 1988ರ ಕಲಂ 13(1)(ಇ) ಸಹವಾಚನ 13(2) ರಡಿಯಲ್ಲಿ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಗಗೊಳಿಸಲು ಸಾಕ್ಷಿ ಪುರಾವೆಗಳು ಲಭ್ಯವಿರುತ್ತದೆಂದು ಲೋಕಾಯುಕ್ತ ಪೊಲೀಸರು ತಿಳಿಸಿರುತ್ತಾರೆ.

ಪರಿಶೀಲನಾ ಅವಧಿಯಲ್ಲಿ ಆರೋಪಿತರ ಹೆಸರಿನಲ್ಲಿ ಮತ್ತು ಅವರ ಕುಟುಂಬದವರ ಹೆಸರಿನಲ್ಲಿ ಇರುವ ಆಸ್ತಿಗಳ ಒಟ್ಟು ಮೌಲ್ಯ ರೂ.59,30,614–37 ಗಳಾಗಿರುತ್ತದೆ. ಈ ಪರಿಶೀಲನಾ ಅವಧಿಯಲ್ಲಿ ಆರೋಪಿತರು ಮತ್ತು ಅವರ ಕುಟುಂಬದ ಸದಸ್ಯರಿಗಾಗಿ ಖರ್ಚು ಮಾಡಿರುವ ಒಟ್ಟು ಹಣ ರೂ.39,63,433–00 ಗಳಾಗಿರುತ್ತದೆ. ಆಸ್ತಿಗಳ ಮತ್ತು ಖರ್ಚುಗಳ ಒಟ್ಟು ಮೊತ್ತ ರೂ.98,94,047–37ಗಳಾಗಿದ್ದು, ಈ ಮೊತ್ತದಿಂದ ಆರೋಪಿತರ ಒಟ್ಟು ಆದಾಯದ ಮೊತ್ತ ರೂ.44,10,509–08 ಗಳನ್ನು ಕಳೆದು ಉಳಿದ ರೂ.54,83,538–29 ಗಳನ್ನು ಆರೋಪಿತರು ಆದಾಯಕ್ಕಿಂತ ಹೆಚ್ಚಿನ ಅಕ್ರಮ ಆಸ್ತಿಗಳಿಸಿರುವುದು ತನಿಖೆಯಿಂದ ದೃಢಪಟ್ಟಿರುತ್ತದೆ. ಆರೋಪಿತರು ತಮ್ಮ ಎಲ್ಲಾ ಬಲ್ಲ ಮೂಲಗಳಿಂದ ಬಂದ ಆದಾಯಕ್ಕಿಂತ ಶೇಕಡವಾರು 124.32 ರಷ್ಟು ಹೆಚ್ಚಿನ ಆಸ್ತಿಯನ್ನು ಭ್ರಷ್ಟಾಚಾರದ ಮೂಲಕ ಗಳಿಸಿರುವುದು ತನಿಖಾ ಸಮಯದಲ್ಲಿ ದೊರೆತಿರುವ ಸಾಕ್ಷ್ಯಾಧಾರಗಳ ಮೂಲಕ ದೃಢಪಟ್ಟಿರುತ್ತದೆ.

ಆರೋಪಿತರು ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ 1988ರ ಕಲಂ 13(1)(ಇ) ಪ್ರಕಾರ ಅಪರಾಧ ಎಸಗಿರುವುದು ಮೇಲ್ನೋಟಕ್ಕೆ ದೃಢಪಟ್ಟಿರುತ್ತದೆ. ಆರೋಪಿತರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ವಿಪುಲವಾದ ಸಾಕ್ಷ್ಯಾಧಾರಗಳಿರುತ್ತದೆ. ಆದುದರಿಂದ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 56 ವಾತೆತ 2008, ಬೆಂಗಳೂರು, ದಿನಾಂಕ:02–05–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ 1988ರ 19(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಆರೋಪಿತ ಅಧಿಕಾರಿಯಾದ ಶ್ರೀ ದಯಾನಂದ ಪೂಜಾರಿ, ವಾಣಿಜ್ಯ ತೆರಿಗೆ ಉಪ ಆಯುಕ್ತರವರು, ವಾಣಿಜ್ಯ ತೆರಿಗೆ ಇಲಾಖೆ, ಇವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ 13(1)(ಇ) ಜೊತೆಯಲ್ಲಿ ಓದಲಾದ ಕಲಂ 13(2)ರ ಪ್ರಕಾರ ಅಭಿಯೋಜಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ನಿಯಮ–19 ರನ್ವಯ ಈ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ಸಹಿಯ ಅಡಿಯಲ್ಲಿ ದಿನಾಂಕ: 02–05–2011 ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಆರ್. ಚಂದ್ರಶೇಖರಾರಾಧ್ಯ**
ಪೀಠಾಧಿಕಾರಿ,
ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2)

ಪಿ.ಆರ್. 1252

## ಆರ್ಥಿಕ ಸಚಿವಾಲಯ

**ವಿಷಯ:** ಶ್ರೀ ಕೆ.ಸಿ.ಚೌಡಪ್ಪ, ವಾಣಿಜ್ಯ ತೆರಿಗೆ ಉಪ ಆಯುಕ್ತರು, ಶ್ರೀ ಗೋವಿಂದರಾಜು, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಮತ್ತು ಶ್ರೀ ಎನ್.ಸಿದ್ಧರಾಜು, ಪ್ರಥಮ ದರ್ಜೆ ಸಹಾಯಕರು, ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ವಾಣಿಜ್ಯ ತೆರಿಗೆ ಆಯುಕ್ತರ ಪತ್ರ ಸಂಖ್ಯೆ:ಡಿಎ/ಜಿಎಜಡ್/ ಸಿಆರ್–03/ 10–11, ದಿನಾಂಕ:02–02–2011.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಪತ್ರದಲ್ಲಿ ವಾಣಿಜ್ಯ ತೆರಿಗೆ ಆಯುಕ್ತರು, ಶ್ರೀ ಕೆ.ಸಿ.ಚೌಡಪ್ಪ, ವಾಣಿಜ್ಯ ತೆರಿಗೆ ಉಪ ಆಯುಕ್ತರು, ಶ್ರೀ ಎಂ.ಗೋವಿಂದರಾಜು, ವಾ.ತೆ.ಸ.ಆ., ಇವರು ಬೆಂಗಳೂರಿನ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿ–045 ರಲ್ಲಿ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರಾಗಿ ಕರ್ತವ್ಯನಿರ್ವಹಿಸುತ್ತಿದ್ದಾಗ, ಮೆ:ಮಣಿಪಾಲ ಮೋಟಾರ್ಸ್ ಪ್ರೈ.ಲಿ. ರವರು ಸರ್ಕಾರಕ್ಕೆ ಚೆಕ್ ಮುಖಾಂತರ ಪಾವತಿಸಿದ ಚೆಕ್‌ಗಳನ್ನು ಹಿಂತಿರುಗಿಸಿ, ಒಪ್ಪಿಕೊಂಡ ತೆರಿಗೆ ಪಾವತಿಸದ ಸಂದರ್ಭದಲ್ಲಿ ಕಾನೂನು ರೀತಿಯ ಕ್ರಮ ಕೈಗೊಳ್ಳದೇ, ಅಮಾನ್ಯಗೊಂಡ ಚೆಕ್‌ಗಳಲ್ಲಿ ಕರದಾತರ ವಿರುದ್ಧ The Negotiable Instruments Act, 1881ರ ಕೆಳಗೆ ಸಂಬಂಧಿಸಿದ ನ್ಯಾಯಾಲಯದಲ್ಲಿ ದೂರು ಸಲ್ಲಿಸದೇ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆಯಡಿಯಲ್ಲಿ ತೆರಿಗೆ ವಸೂಲಿ ಕ್ರಮ ಕೈಗೊಳ್ಳದೆ, ಕರದಾತರು ಚೆಕ್ ಮುಖಾಂತರ ತೆರಿಗೆ ಪಾವತಿಸದಂತೆ ನಿರ್ಬಂಧಿಸಲು ಕ್ರಮ ಕೈಗೊಳ್ಳದೆ ಮತ್ತು ಸದರಿ ಕರದಾತರಿಂದ ಹೆಚ್ಚುವರಿ ಭದ್ರತಾ ಠೇವಣಿ ಬೇಡಿಕೆಗೆ ದುರುದ್ದೇಶದಿಂದ ಕ್ರಮ ಕೈಗೊಳ್ಳದೇ ತೀವ್ರತರಹದ ದುರ್ನಡತೆಯನ್ನೆಸಗಿರುತ್ತಾರೆ.

ಮೆ:ಮಣಿಪಾಲ ಮೋಟಾರ್ಸ್ ಪ್ರೈ.ಲಿ. ರವರ ಕಡತ ನಿರ್ವಹಿಸುತ್ತಿದ್ದ ಶ್ರೀ ಎನ್.ಸಿದ್ಧರಾಜು, ಪ್ರ.ದ.ಸ., ಮೇಲ್ಕಾಣಿಸಿದ ಅಂಶಗಳಿಗೆ ದುರುದ್ದೇಶದಿಂದ ಸೂಕ್ತ ಸಮಯದಲ್ಲಿ ಕಡತ ಮಂಡಿಸಲು ವಿಫಲರಾಗಿ ದುರ್ನಡತೆಯನ್ನೆಸಗಿರುತ್ತಾರೆ.

ಈ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ(ನಡತೆ) ನಿಯಮಾವಳಿಗಳು 1966 ರ ನಿಯಮ 3(1) (ii) ಮತ್ತು (iii)ನ್ನು ಉಲ್ಲಂಘಿಸಿರುವುದರಿಂದ ಶಿಸ್ತುಕ್ರಮಕ್ಕೆ ಒಳಪಡುವವರಾಗಿರುತ್ತಾರೆ. ಆದುದರಿಂದ ಸದರಿ ಅಧಿಕಾರಿ ಮತ್ತು ನೌಕರರ ವಿರುದ್ಧ ಜಂಟಿ ಶಿಸ್ತುಕ್ರಮ ಕೈಗೊಳ್ಳಲು ವಾಣಿಜ್ಯ ತೆರಿಗೆ ಆಯುಕ್ತರು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಈ ಪ್ರಕರಣದಲ್ಲಿನ ಅಧಿಕಾರಿ/ನೌಕರರ ಪೈಕಿ ಇಬ್ಬರು ಮಾತ್ರ ಗ್ರೂಪ್–ಎ ಅಧಿಕಾರಿಯಾಗಿದ್ದು, ಇವರನ್ನು ಸೇವೆಯಿಂದ ತೆಗೆದುಹಾಕುವ ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವು ಸರ್ಕಾರವಾಗಿರುತ್ತದೆ. ಈ ಪ್ರಕರಣದಲ್ಲಿ ಒಂದೇ ವ್ಯವಹರಣೆಯ

ದೃಷ್ಟಿಯಿಂದ ಈ ಜಂಟಿ ಇಲಾಖಾ ವಿಚಾರಣೆಗೆ ಸರ್ಕಾರವು ಶಿಸ್ತು ಪ್ರಾಧಿಕಾರಿಯಾಗಿ ಕಾರ್ಯನಿರ್ವಹಿಸುವುದು ಎಂದು ತೀರ್ಮಾನಿಸಿ, ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 10 ವಾತೆತ 2011 ಬೆಂಗಳೂರು, ದಿನಾಂಕ: 04–05–2011**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 13 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಈ ಮುಂದೆ ತಿಳಿಸಿರುವ ಆಪಾದಿತ ಆಧಿಕಾರಿ/ನೌಕರರ ವಿರುದ್ಧ ಮೇಲೆ ಹೇಳಿದ ಆರೋಪಗಳ ಬಗ್ಗೆ ಸ್ಪಷ್ಟವಾದ ದೋಷಾರೋಪಣೆ ಪಟ್ಟಿಯನ್ನು ತಯಾರಿಸಿ ಒಂದೇ ವ್ಯವಹರಣೆಯಲ್ಲಿ ಶಿಸ್ತಿನ ಕ್ರಮ ಕೈಗೊಳ್ಳಬೇಕೆಂದು ಈ ಮೂಲಕ ಆದೇಶಿಸುತ್ತದೆ:

1) ಶ್ರೀ ಕೆ.ಸಿ.ಚೌಡಪ್ಪ, ವಾಣಿಜ್ಯ ತೆರಿಗೆ ಉಪ ಆಯುಕ್ತರು

2) ಶ್ರೀ ಗೋವಿಂದರಾಜು, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು

3) ಶ್ರೀ ಎನ್.ಸಿದ್ಧರಾಜು, ಪ್ರಥಮ ದರ್ಜೆ ಸಹಾಯಕರು

ಅಲ್ಲದೆ, ಒಂದೇ ವ್ಯವಹರಣೆಯ ಉದ್ದೇಶಕ್ಕಾಗಿ ಸರ್ಕಾರವು ಶಿಸ್ತು ಪ್ರಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತದೆ. ಕ್ರಮ ಸಂಖ್ಯೆ: 1 ರಿಂದ 3 ರಲ್ಲಿರುವ ಆಪಾದಿತರುಗಳಿಗೆ ಯಾವುದೇ ದಂಡನೆಯನ್ನು ವಿಧಿಸಲು ಸರ್ಕಾರವು ಅಧಿಕಾರ ಹೊಂದಿರುತ್ತದೆ.

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11, 11–ಎ ನಲ್ಲಿ ನಿಗದಿಪಡಿಸಿರುವ ಕಾರ್ಯ ವಿಧಾನವನ್ನು ಈ ವಿಚಾರಣೆಯಲ್ಲಿ ಅನುಸರಿತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಆರ್. ಚಂದ್ರಶೇಖರಾರಾಧ್ಯ**

ಪೀಠಾಧಿಕಾರಿ,

ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2)

ಪಿ.ಆರ್. 1253

## ಇಂಧನ ಸಚಿವಾಲಯ

**ವಿಷಯ:** M/s Copse Energy Private Limited ಇವರಿಗೆ 6 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆ ಹಂಚಿಕೆ ಬಗ್ಗೆ

**ಓದಲಾಗಿದೆ: 1.** ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/08/ Copse /2010/2010 ದಿನಾಂಕ: 01/03.7.2010 ಮತ್ತು ಕೆಆರ್ಇಡಿ/08/ Copse /2010/3417 ದಿನಾಂಕ: 02/18.12.2010

**2.** ದಿನಾಂಕ: 25.01.2011ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ(1)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Copse Energy Private Limited ಇವರಿಗೆ ಗದಗ ಜಿಲ್ಲೆಯ, ಗದಗ ತಾಲ್ಲೂಕಿನ ಕಂಗಿನಹಾಳ್, ನಿರಾಳ್ಗಿ ಮತ್ತು ಉಮಾಚಿಗಿ ಗ್ರಾಮಗಳಲ್ಲಿ 6 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s Copse Energy Private Limited ಇವರಿಗೆ 6 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 304 ಎನ್‌ಸಿಇ 2010, ಬೆಂಗಳೂರು, ದಿನಾಂಕ: 02.05.2011**

M/s Copse Energy Private Limited ಇವರಿಗೆ ಗದಗ ಜಿಲ್ಲೆಯ, ಗದಗ ತಾಲ್ಲೂಕಿನ ಕಂಗಿನಹಾಳ್, ನಿರಾಳ್ಗಿ ಮತ್ತು ಉಮಾಚಿಗಿ ಗ್ರಾಮಗಳಲ್ಲಿ 6 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಗೆ ವಿವರಿಸಿರುವಂತೆ ಈ ಆದೇಶದಲ್ಲಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ:–

| Topo sheet No. | Proposed Capacity in MW | Near by villages of the proposed area and District | Geographical area description of the project |
|---|---|---|---|
| 48M/11 | 6 MW | Kanginhal, Niralgi, Kot Umachigi, Gadag District | Company has proposed a ground level plain area, lies on the North East of Gadag Town. The area has the presence of power lines and district roads also runs across the area. The elevation of the site varies from 618 to 636 mtrs. The entire area has the presence of |

| | | | |
|---|---|---|---|
| | | | agriculture activities and mostly it is a private land. The identified area is covered in the following Geographical Co-ordinates:<br>Latitude: $15^0$28'28"-$15^0$30'0"N<br>Longitude: $75^0$43'18"-$75^0$45'0"E<br>Ridge peaks: 630, 636 Amsl |

1. ಸದರಿ ಯೋಜನೆಯನ್ನು Financial Closure ಸಾಧಿಸಿದ 24 ತಿಂಗಳುಗಳ ಒಳಗಾಗಿ ಪ್ರಾರಂಭ ಮಾಡತಕ್ಕದ್ದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳೊಳಗಾಗಿ ಯೋಜನಾಭಿವೃದ್ಧಿದಾರರು ರೂ. 400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್‌ನಕ್ಷೆ ಮತ್ತು ವಿಂಡ್ ಫಾರ್ಮ್‌ನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| **ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ** | **5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ** | **ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ)** |
|---|---|---|
| >200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ.ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ/ವಾಣಿಜ್ಯ & ಕೈಗಾರಿಕೆ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.
7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವಿದ್ಯುತ್ ಖರೀದಿ ಒಡಂಬಡಿಕೆ/ವೀಲಿಂಗ್ ಮತ್ತು ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವುದು.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.
11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1254

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

## ಇಂಧನ ಸಚಿವಾಲಯ

## ತಿದ್ದುಪಡಿ

ಸಂಖ್ಯೆ: ಇಎನ್ 161 ಎನ್‌ಸಿಇ 2011, ಬೆಂಗಳೂರು, ದಿನಾಂಕ: 03.05.2011

ಸರ್ಕಾರಿ ಆದೇಶ ಸಂಖ್ಯೆ: ಇಎನ್ 70 ಎನ್‌ಸಿಇ 2009 ದಿನಾಂಕ: 23.2.2011ರ ಆದೇಶ ಭಾಗದ ನಿಬಂಧನೆ (1)ರಲ್ಲಿ ನಮೂದಿಸಿರುವ **ರೂ. 15.00 ಲಕ್ಷ ಎಂಬುದರ ಬದಲಾಗಿ ರೂ. 12.00 ಲಕ್ಷಗಳೆಂದು** ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

ಪಿ.ಆರ್. 1255

## ಶಿಕ್ಷಣ ಸಚಿವಾಲಯ

**ವಿಷಯ :** ಬಿ.ಇ. ಟ್ರಾನ್ಸ್‌ಪೋರ್ಟೇಷನ್ ಇಂಜಿನೀಯರಿಂಗ್ ಪದವಿಯು ಬಿ.ಇ. ಸಿವಿಲ್ ಇಂಜಿನೀಯರಿಂಗ್ ಪದವಿಗೆ ಸಮಾನವೆಂದು ಪರಿಗಣಿಸುವ ಬಗ್ಗೆ.

**ಓದಲಾಗಿದೆ :**
1. ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅಪೀಲ್ ಸಂಖ್ಯೆ: 27/2011ರಲ್ಲಿ ದಿನಾಂಕ: 27/01/2011ರಂದು ನೀಡಿರುವ ಆದೇಶ.
2. ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ, ಬೆಳಗಾವಿ ಇವರ ಸುತ್ತೋಲೆ ಸಂ: ವಿತಾವಿ/ಶೈಕ್ಷಣಿಕ/ಎ6/2008–09/11343, ದಿನಾಂಕ: 01/02/2008.
3. ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ, ಬೆಳಗಾವಿ ಇವರ ಪತ್ರ ಸಂಖ್ಯೆ:ವಿತಾವಿ/ಶೈಕ್ಷಣಿಕ/2010–11/13982, ದಿನಾಂಕ: 04/02/2011.

**ಪ್ರಸ್ತಾವನೆ :**

ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ್ದ ರಿಟ್ ಅಪೀಲ್ ಸಂಖ್ಯೆ: 27/2011ರ ಪ್ರಕರಣದಲ್ಲಿ ಮಾನ್ಯ ನ್ಯಾಯಾಲಯವು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ರಾಜ್ಯ ಸರ್ಕಾರಕ್ಕೆ ಮಾಡಿರುವ ಆದೇಶದನ್ವಯ ಹಾಗೂ ಮೇಲೆ ಕ್ರಮ ಸಂಖ್ಯೆ (2) ಮತ್ತು (3)ರಲ್ಲಿ ಓದಲಾದ ಪತ್ರಗಳಲ್ಲಿ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ, ಬೆಳಗಾವಿಯು ಇವರು ಬಿ.ಇ. ಟ್ರಾನ್ಸ್‌ಪೋರ್ಟೇಷನ್ ಇಂಜಿನೀಯರಿಂಗ್ ಪದವಿಯು ಬಿ.ಇ. ಸಿವಿಲ್ ಇಂಜಿನೀಯರಿಂಗ್ ಪದವಿಗೆ ಬೋಧಕ ಹುದ್ದೆಗಳ ನೇಮಕಾತಿಗೆ ಹೊರತುಪಡಿಸಿ ಇತರೆ ಹುದ್ದೆಗಳ ನೇಮಕಾತಿಗೆ ಸಮಾನವೆಂದು ಪರಿಗಣಿಸಬಹುದಾಗಿದೆ ಎಂದು ವರದಿ ನೀಡಿರುವ ಹಿನ್ನೆಲೆಯಲ್ಲಿ, ಈ ಆದೇಶ.

**ಸರ್ಕಾರಿ ಆದೇಶ ಸಂ. ಇಡಿ 30 ಟಿಜಿಎಲ್ 2011, ಬೆಂಗಳೂರು, ದಿನಾಂಕ: 23/07/2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿ.ಇ. ಟ್ರಾನ್ಸ್‌ಪೋರ್ಟೇಷನ್ ಇಂಜಿನೀಯರಿಂಗ್ ಪದವಿಯು ಬಿ.ಇ. ಸಿವಿಲ್ ಇಂಜಿನೀಯರಿಂಗ್ ಪದವಿಗೆ ಬೋಧಕ ಹುದ್ದೆಗಳ ನೇಮಕಾತಿಗೆ ಹೊರತುಪಡಿಸಿ ಇತರೆ ಹುದ್ದೆಗಳ ನೇಮಕಾತಿಗೆ ಮಾತ್ರ ಸಮಾನವೆಂದು ಪರಿಗಣಿಸಬಹುದಾಗಿದೆ ಮತ್ತು ಈ ಸಮಾನತೆಯ ಬಗ್ಗೆ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ, ಬೆಳಗಾಂ ಇವರಿಂದ ಪ್ರಮಾಣ ಪತ್ರವನ್ನು ಪಡೆದ ವಿದ್ಯಾರ್ಥಿಗಳಿಗೆ ಮಾತ್ರ ಅನ್ವಯಿಸತಕ್ಕದ್ದು.

**ಈ ಆದೇಶವನ್ನು ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 2(1)(ಹೆಚ್)ರ ಅನ್ವಯ ಹೊರಡಿಸಲಾಗಿದೆ.**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಎಸ್. ಜಾಪಾಲಿ**
ಸರ್ಕಾರದ ಉಪ ಕಾರ್ಯದರ್ಶಿ
ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

ಪಿ.ಆರ್.ನಂ: 1858